# ನಮಸ್ಕಾರ

**ಕಂಚಿನ ಕನ್ನಡಿಯ ಕನಕಿಯ** ಸಂಗಡಲೆ ಈ **ದಿನಾರಿಯನ್ನು** ಕೂಡಿಸಿಕೊಳ್ಳಬೇಕು **ದಿನಾರಿ** ಕತೆಯಲ್ಲಿ ಭಿಕಾರಿ ಶ್ರೀಮಂತನಾಗಿದ್ದಾನೆ. ನಗರರಕ್ಷಕನಾದವನಿಗೂ ಅನೇಕ ರಸನಿಮಿಷಗಳು ಒದಗಿಬರಬಹುದೆಂದು ಅದರ ಸೂಚನೆ. **ಸ್ಪ್ರಿಂಗ್** ಕತೆಯಲ್ಲಿ ಅಚ್ಚುಕೂಟದವರ ಕಿರುಕುಳಗಳನ್ನು ಸೂಚಿಸಲು ಹೊರಟಿದ್ದವನು ದಾರಿಬದಲಾಯಿಸಿ ಗಡಿಯಾರ ರಿಪೇರಿಗಾರನ ಪತ್ನಿಯ ಸೌಭಾಗ್ಯವನ್ನೇ ಹೆಚ್ಚಾಗಿ ನೇದುಬಿಟ್ಟೆ. ಅದಕ್ಕೆ ಕಾರಣ ಹಲವು! ಮೈಸೂರು **ಆಕಾಶವಾಣಿಯವರು** ತಮ್ಮದೊಂದು ಮನರಂಜನ ಕಾರ್ಯಕ್ರಮದಲ್ಲಿ **ಸ್ಪ್ರಿಂಗ್ ಅಥವ ಚಿಮ್ಮಿಯನ್ನು** ಸೇರಿಸಿಕೊಂಡು ಉಪಕಾರಮಾಡಿದರು. **ಗುಂಡು**-ಕುದುರೆಯ ಕತೆ. ಕನ್ನಂಬಾಡಿ ಕಟ್ಟೆ ಕಟ್ಟುತ್ತಿದ್ದಾಗ ನಡೆದ ಸಣ್ಣ ವಿಚಾರ. **ಭಯನಿವಾರಣೆಯನ್ನು** 'ಕಥಾಸಂಕಲನವಾದ ಮಧುವನ'ದಿಂದ ತೆಗೆದುಕೊಂಡಿದ್ದೇನೆ. ಅದರಲ್ಲಿ ನರನಾರಿಯರ ಕಡೆಗೆ ಗಮನಕೊಡವೆ ಇದ್ದು, ಪತಿಪತಿ ಸರ್ಪಜೀವಿಗಳ ಕಡೆಗೆ ಗಮನವಾದರೆ ಹೊಸದೊಂದು ಪ್ರಪಂಚದ ಬಾಗಿಲು ತೆರೆದಂತಾಗುವುದು. **ಹಿಂತಿರುಗಿದಕೋತಿಯನ್ನು** ಓದಿದವರು—ಇದೇನು ನಂಬುವ ಹಾಗಿದೆಯೇನಯ್ಯಾ!—ಎಂದು ಸಂದೇಹಪಟ್ಟಿದ್ದಾರೆ. ನಿಮ್ಮಲ್ಲಿ ಮರೆಮಾಚುವುದೇನಿದೆ! ಕತೆಯಲ್ಲಿನ **ಕೋತಿಯೇನೋ** ದಿಟ; ಆದರೆ ಅದರ ಬಾಲಮಾತ್ರ ಊಹೆಯ ಭಂಡಾರದ್ದು! ಇನ್ನುಳಿದುದು **ಬಿಂದುಮಾಧವ**-ಮೊದಲನೆ ಮಹಾಯುದ್ಧಕ್ಕೆ ಸ್ವಲ್ಪ ಮುಂಚೆ ಇದು ನಿಜವಾಗಿ ನಡೆಯಿತಂತೆ! ಇದನ್ನು ಜಯಕರ್ಣಾಟಕದಿಂದ ಬಿಡಿಸಿಕೊಂಡಿದ್ದೇನೆ.

ಈ ಸಮಾರಾಧನೆಗೆ ನೆರವಾದ ಪತ್ರಿಕ, ಮುದ್ರಕ, ಮತ್ತು ವಿಮರ್ಶಕ ಮಹನೀಯರಿಗೆಲ್ಲ ವಂದಿಸುತ್ತೇನೆ.

ಶ್ರಾವಣ ಬಂದಿದೆ. ಮಳೆ ಬಂದು ನಿಲ್ಲುವ ಸಮಯ. ಒಡೆದ ಭಾರತವೆಲ್ಲ ಪಾದರಸದಂತೆ ಒಂದಾಗಿ **ತ್ರಿವರ್ಣಝಂಡಾ** ಏರಿಸುವ ಸುಸಮಯ!

ಹಳೆಯ ರಸವೇ ಹೊಸಚಿಗುರಾಗಿ, ಮೊಗ್ಗಾಗಿ ಭಾರತದಲ್ಲಿ ಅವತರಿಸುವ **ಸರ್ವಜಿತು ಸಮಯ.** ಇಂಥಾ ಸುಸಂದರ್ಭದಲ್ಲಿ ಇದನ್ನು ನಿಮ್ಮಲ್ಲಿ ಅರ್ಪಿಸಿದ್ದೇನೆ. ಜೈಹಿಂದ್ ವಿದ್ಯುತ್ತು ನನ್ನಲ್ಲಿಯೂ, ಸಂಚಾರವಾದರೆ ಆಗ್ಗಿ ರಸಗುಳ್ಳಗಳನ್ನೇ ನಿಮಗೆ ಸಮರ್ಪಿಸುತ್ತೇನೆ.

ಆದರೆ ಒಂದು ಮಾತು—ಮೊದಲು ಯಾವಕತೆ ಓದುವಿರಿ ? **ದಿನಾರಿಯೋ ?** ಬೇಡ, **ಬಿಂದುಮಾಧವನಿಂದ ದಿನಾರಿಗೆ** ಬನ್ನಿ—ಅಂದಿನಿಂದ ಇಂದಿಗೆ—ಅಥವ, ನಿಮ್ಮ ಚಿತ್ತ........

ಬೆಂಗಳೂರು
೮–೮–೧೯೪೭

**ಹೊಯಿಸಳ**



# ಪರಿವಿಡಿ

# ೧. ದಿನಾರಿ

"ಇಡ್ಲೀ, ಚಟ್ಣಿ, ಇಡ್ಲೀ!" ಎಂತ ಕೂಗಿಕೊಂಡು ಬೈಸಿಕಲ್ ಮೇಲೆ ಬಂದವನು ಹೊರಟುಹೋಗಬೇಕಾಗಿತ್ತು, ತನ್ನ ಎಡ ಹಿಡಿದು; ಆದರೆ ಅವನು ಹಾಗೆ ಹೋಗಲಿಲ್ಲ. ದಿಲೇರಖಾನ್ ನಿಂತಿದ್ದ ಕಡೆಗೆ ಬಂದ.

ದಿಲೇರ್ ಹೇಳಿದ—"ಖಬರ್‌ದಾರ್ ಇಡ್ಲೀಖಾನ್, ರವಾನಿಸಿ ಚಟ್ಟೀನ್ ಪೋಲೀಸ್‌ಠಾನ್! ಯಾಕೋ ಬಂದಿ ಇಲ್ಲಿಗೇ? ಸರ್ಕಲ್ ಸ್ಟಾಂಡಲ್ಲಿ, ನಿಂತಿದ್ದಾನೆ ಪೋಲೀಸ್, ಬೆದರಿಕೊಂಡು ಹೋಗೋ ಜನಾಬ್ ಚಟ್ನೀ!"

ಇಡ್ಲೀ ತಂದವನು ನಗುತ್ತ ಹೇಳಿದ—"ಹೊಸದಾಗಿ ಹೂಡಿದ ಹೋರಿ ಯಾದರೆ ಬೆದರೀತಪ್ಪ. ನಾನು ಹಳೇ ದಫೇದಾರ್ ಹುಲಿ. ನನ್ನ ಮೀಶೆ ನೋಡೋ ಬೆಳ್ಳಗಾಗಿದ್ದರೂ ಬಿರುಸಾಗಿದೆ. ಪಾಪ, ಆ ಹೆಣ್ಣು, ಸಂಕಟ ಪಟ್ಟುಕೊಂಡು ಹೇಳಿತು........ನಿನಗೆ ಈ ದಿನ ಮೊಟ್ಟೀನೂ ಕೊಡದೆ, ರೊಟ್ಟೀನೂ ಕೊಡವೆ ಕಳಿಸಿದಳಂತೆ ಹೌದೇನೋ! ಅಯ್ಯೋ ಚಿಗುರು ಮೀಸೆ ಸರ್ದಾರ ಕೈಕಾಲು ಸೋಲ್ತಾವೊ! ಈಗ ಈ ಇಡ್ಲೀ ತಿನ್ನು, ಈ ಕಾಗದದಲ್ಲಿ ಕೈವರಿಸಿಕೊ, ಈ ಚಕ್ಕೋತನ ತೊಳೆ ಬಿಡಿಸಿ ಬಾಯಿಗೆ ಹಾಕ್ಕೋತಾ ನಿಂತಿರು, ಕಾದುಕೊಂಡಿರು. ಜಟಕ ಬಂದರೆ, ಬಸ್ ನಿಲ್ಲಿಸು. ಹೆಂಗಸರು ಬಂದರೆ ಕಾರ್ ನಿಲ್ಲಿಸು. ವಿಶೀಳ್‌ಮಾಡು ಜೋರಾಗಿ!" ಹೀಗೆಂದು ಒಂದು ಕಟ್ಟುಬೀಡಿ ಒಂದು ಬೆಂಕೀ ಪೊಟ್ಣ ಕೈಲಿಟ್ಟು ಹೊರಟುಬಿಟ್ಟ.

ದಿನಾರಿ ನೂರ್ ಈ ಸರ್ಕಲ್ ಸರದಾರನ ಹೆಂಡತಿ. ಅವಳೇ ಇಡ್ಲೀ ಕಳಿಸಿದ್ದವಳು. ಇಡ್ಲೀ ತಂದವನು ಕಾಸು ಇಸುಗೊಳ್ಳದೆ ಹೊರಟುಹೋದ. ಮುಂದೆ ಹಿಂದೆ ಎಡಬಲಗಳಿಂದ ಕಾರು, ಸೈಕಲ್ಲು, ಚಕಡಾ, ಲಾರಿ, ರಿಕ್ಷಾ ಮೊದಲಾದ್ದರ ನಡುನಡುವೆ ಚಿಳ್ಳೆಪಿಳ್ಳೆ, ತಾಯಿ ತಂದೆ, ಶೆಟ್ಟಿ ಸೋಮಯಾಜಿ, ಮುದುಕ ತದಕ, ಮೊದಲಾಗೆಲ್ಲ ಬರುವರು—ಒಂದು ನಿಮಿಷಕ್ಕೆ ಎಷ್ಟು ಕಾರು, ಎಷ್ಟು ಜನ, ಎಂತ ಲೆಕ್ಕ ಹಾಕಿಟ್ಟುಕೊಂಡ ದಿಲೀರಜ್ಜ, ದಿನ ದಿನವೂ ಇಂಥಿಂಥಾ ಕಡೆಯಿಂದ ಇಷ್ಟಿಷ್ಟೇ ಹೊತ್ತಿನಲ್ಲಿ, ಇಷ್ಟೇ ಕಾರು, ಇಷ್ಟೇ ಜಟಕ, ಇಷ್ಟೇ ಜನ ಬಂದಾರೆಂದು ಊಹಿಸಿಕೊಂಡಿದ್ದ. ಆ ಸರ್ಕಲ್‌ನಲ್ಲಿ ಆ ಸಿಮೆಂಟ್ ಗದ್ದುಗೆಯಲ್ಲಿ ಕ್ರೋಟನ್ ಗಿಡಗಳ ನಡುವೆ ಅವನೇ ಸರ್ವಾಧಿಕಾರಿ. 'ಸ್ಟಾಪ್-ಚಕ್ರ' ತೋರಿಸಿದರೆ ನಿಲ್ಲಬೇಕು, ಕೈಯಾಡಿಸಿದರೆ ಹೋಗಬೇಕು, ಪೀಪಿ ಊದಿದರೆ ಹಿಂತಿರುಗಬೇಕು, ಯಾರಾದರೂ ಸರಿ. ಆ ದಿವಸ ದಿವಾನ್ ಬಹದ್ದೂರರ ರೋಲ್ಸ್‌ರಾಯ್‌ಸಂಥಾ ಗಾಡಿ ನಿಲ್ಲಿಸಿಬಿಟ್ಟ, ಷೋಫರನ ಹತ್ತಿರ ಡ್ರೈವಿಂಗ್ ಲೈಸೆನ್ಸ್ ಇರಲಿಲ್ಲ! ಆಗ ಪಾಪ ಏನು ಮಾಡುತ್ತಾರೆ ದಿವಾನ್ ಬಹದ್ದೂರ್ ಸಾಹೇಬರು? ಅವರು ತಾವೇ ಇಳಿದು ಬಂದು ತಮ್ಮ ಡ್ರೈವಿಂಗ್ ಲೈಸೆನ್ಸ್ ತೋರಿಸಿ, ಷೋಫರನನ್ನು ಹಿಂದಕ್ಕೆ ಕಳಿಸಿ, ತಾವೇ ಡ್ರೈವ್‌ಮಾಡಿಕೊಂಡು ಹೋದರು.

ರಾಂಗ್‌ಸೈಡು, ಓವರ್‌ಲೋಡು, ಹೀಗೇ ಏನೇನೋ ಅಪರಾಧಕ್ಕೆಲ್ಲ ಸಿಕ್ಕಿಬಿಟ್ಟಿದ್ದರು ಎಂಥೆಂಥವರೆಲ್ಲ. ಒಂದು ಸಾರಿ ದಿಲೀರನ ಜೆಲ್ಲಿಗೆ ಸಿಕ್ಕಿದ್ದವರು ಇನ್ನೊಂದು ಸಾರಿ ಅವನನ್ನ ಮರೆಯುವ ಹಾಗೆ ಇರದೆ ಮಮತೆ ಇಟ್ಟಿರುತ್ತಿದ್ದರು. ಕಾನೂನುವಂತನೆಂದು ಇವನಲ್ಲಿ ದ್ವೇಷ ಯಾರಿಗೂ ಇರಲಿಲ್ಲ. ಅದರ ಫಲವಾಗಿ ದಿನಾರಿಯ ಅಡುಗೆಮನೆಯಲ್ಲಿ ಹಣ್ಣುಹಂಪಲು ಹೂವು ಮೊದಲಾದ ಕಾಣಿಕೆಗಳು ಇಟ್ಟಾಡಿ ಹೋಗುತ್ತಿದ್ದುವು. ದಿಲೀರ ಕಾಸೆಂದೂ ಮುಟ್ಟುತ್ತಿರಲಿಲ್ಲ. ಅದೇ ಅವನ ಹಿರಿತನ.

ಐದು ಹಾದಿ ನಡುವೆ ಮೆಟ್ಟಲುಗದ್ದಿಗೆ ಕಟ್ಟಿ, ಖಾಕಿ ತೊಡಿಸಿ, ಪೇಟ ಇಟ್ಟು, ನಡುವಿನಲ್ಲಿ ಲಠ್ಠ, ಜೇಬಲ್ಲಿ ಪೀಪಿ, ಕಾಲಲ್ಲಿ ಆನೆ ಬೂಡ್ಸು, ಕೈಯಲ್ಲಿ 'ಸ್ಟಾಪ್-ಚಕ್ರ' ಕೊಟ್ಟು ನಿಲ್ಲಿಸಿದರೆ ಸುಮ್ಮನೆ ಆಯಿತೆ ಅವನೊಬ್ಬ

ಮಹಾ ಅಧಿಕಾರಿ, ಚಲ್ತಿ ದುನಿಯಾದಲ್ಲಿ! ಅಂತರರಾಷ್ಟ್ರೀಯ ಹಾದಿಗಳು ಸೇರುವ ಬಳಿ ನಿಲ್ಲುವ ಯಾವ ಮಹಾಧಿಕಾರಿಗೂ ಆತನು ಸರಿಸಮ.

ಅವನೇ ಪೋಲೀಸ್ ರಾಜ. ದಿನಾರಿಯ ರಾಜ-ಮನೆಯಲ್ಲಿ, ಸಂಚಾರೀ-ಪ್ರಜೆಗಳ-ರಾಜ ಇಲ್ಲಿ. ಗಾಬರಿಯ ಗೌರವಕ್ಕೆ ಗುರುತಾದ ಮೂರ್ತಿ. ಅವನಂಥಾ ಪೋಲೀಸನೇ ಪಾಲಿಸುವಾತ ನಗರವನ್ನು- “ಶಿವಾಸ್ತೇ ಪಂಥಾನಸ್ಸಂತು”—ಎಂಬುದು ದಿಟವಾಗಬೇಕಾದರೆ ಈ ಹಾದಿಯಲ್ಲೇ ಹೋಗಿರಿ! ನಿಮ್ಮ ಕ್ಷೇಮ ಸಂಪಾದನೆಗೆ ನನ್ನ ಕೈ ನೇರದ ಹಾದಿ, ನನ್ನ ಬಲವಂದು ಹೋಗಿ!”

ಈ ರೀತಿಯಾಗಿ ದಾರಿ ತೋರಿಸುವ ಪೋಲೀಸ ಅಧಿಕಾರಿ.... ಜನರ ಹೆಜ್ಜೆಯಿಂದಲೇ ಅವರ ಮನೋಗತವನ್ನು ಅರಿಯಬಲ್ಲ! ರಾಜಠೀವಿಯಿಂದ, ನೆಲವನ್ನು ಅನುಗ್ರಹಿಸುತ್ತ ಹೋಗುವವನ್ನು ಅವನು ಮಾತಾಡಿಸುವುದಿಲ್ಲ. ಧಿಕ್ಕಾರದಿಂದ ಭೂಮಿಯನ್ನು ಒದ್ದುಕೊಂಡು ನಡೆವವನು ಎಂದಾದರೊಂದು ದಿನ ತನ್ನ ಪಾಶಕ್ಕೆ ಸಿಕ್ಕುವವನೆಂದು ದಿಲೇರನಿಗೆ ಗೊತ್ತು. ಹಗಲು ಹಿಂಗಾಲಮೇಲೂ ರಾತ್ರಿ ಮುಂಗಾಲಮೇಲೂ ಭಾರ ಊರಿ ನಡೆಯುವಂಥಾ ಕೊರಮನನ್ನು ಕಂಡರೆ ಅವನು ಬಿಡುವುದಿಲ್ಲ. ಪೋಲೀಸನಿಗೆ ವಾಹನಗಳ ಹಿಂಭಾಗ ಮುಂಭಾಗಗಳಮೇಲೂ ಹಾಗೇ ತಿರುಗುವವರ ಹಿಮ್ಮಡಿ, ಮುಮ್ಮಡಿಗಳಮೇಲೂ ಕಣ್ಣು. ಅಂತೂ ಪೋಲೀಸು ನಗರಕ್ಕೊಂದು ನಯನ.

ಇಂಥಾ ದಿಲೇರಖಾನ್ ಒಮ್ಮೆ ಬೀದಿಯ ಭಿಕಾರಿಯಾಗಿದ್ದನು. ತಂದತಾಯಿಯರ ಗುರುತರಿಯದ ಚೌಕದ ಚಮರನಾಗಿದ್ದನು. ಬೀಡಿ ಸಿಗರೇಟು ತುಂಡುಗಳು ಸಿಕ್ಕಿದಷ್ಟೆಲ್ಲ ಹರಕಂಗಿಯ ಕಿಸೆಗಳಲ್ಲಿ ತುಂಬಿಕೊಂಡು ಬೆಂಕಿ ಪೆಟ್ಟಿಗೆಗಳನ್ನು ಹುಡುಕಿ ತಿರುಗುತ್ತಿದ್ದು, ಹಸಿವಾದಾಗ ಹಣ್ಣಂಗಡಿಗಳೆದುರಿನಲ್ಲಿ ಹೊಂಚುಹಾಕಿಕೊಂಡು ಕಾದಿದ್ದು, ರೊಟ್ಟಿ ಅಂಗಡಿಗಳಲ್ಲಿಯೂ, ಕಾಕಹೋಟಲುಗಳಲ್ಲಿಯೂ ಸರಬರಾಜು ಮಾಡಿ ಹೊಟ್ಟೆ ತುಂಬಿಸಿಕೊಂಡು, ಯಾವುದಾದರೂ ಜಗುಲಿಯಲ್ಲಿ ಪವಡಿಸಿಬಿಡುತ್ತಿದ್ದನು. ಕಾಗೆ ನಾಯಿಗಳ ಕೂಗೇ ಉವಡ ಅವನಿಗೆ. ನಲ್ಲಿಯ ಬಳಿಯೇ ಬಚ್ಚಲು ಮನೆ ಅವನ ಮುಖದಲ್ಲಿ ಯಾವುದೋ ವಿಲಕ್ಷಣ ಮಾಟವಿತ್ತು ಬೆ-ಳಕಿತ್ತು. ಯಾರಾದರೂ

ಅವನನ್ನು ಕರೆದು ಏನಾದರೂ ಕೆಲಸಮಾಡಿಸಿಕೊಂಡು ತೃಪ್ತಿಪಟ್ಟು ಕೈಲಿದ್ದದ್ದು ಏನಾದರೂ ಕೊಟ್ಟುಕಳುಹಿಸುತ್ತಿದ್ದರು.

ಕಡೆಗೊಬ್ಬ ಜಟಕಗಾಡಿಯ ಮಾಲೀಕನು ಈ ಭಿಕಾರಿಯನ್ನು ತನ್ನ ಬಳಿಯಲ್ಲಿಟ್ಟುಕೊಂಡನು. ಆಗಲೂ ಮನೆ ಸೇರದೆ ಗಾಡಿಯಲ್ಲೇ ಮಲಗುತ್ತಿದ್ದನು. ಒಂದೆರಡು ವರ್ಷಗಳಲ್ಲಿ ಜಟಕ ನಡೆಸುವುದನ್ನು ಚೆನ್ನಾಗಿ ಕಲಿತನು. ತುಂಬ ಬಾಡಿಗೆ ಹಣ ತರುತ್ತಿದ್ದ ಈತನನ್ನು ಬಿಡುವ ಮನಸ್ಸಿಲ್ಲ ಆತನಿಗೆಂದು ತಿಳಿದಾಗ, ಅವನನ್ನು ಬಿಟ್ಟು, ಬಸ್ಸು ತೊಳೆಯುವ ಕೆಲಸಕ್ಕೆ ಸೇರಿಕೊಂಡನು. ಸಾಹುಕಾರನು ಈ ಬಾಲಕನಲ್ಲಿ ಮೆಚ್ಚುಗೆ ತೋರಿಸುವುದಕ್ಕಾಗಿ ಕಂಡಕ್ಟರ ಕೆಲಸಕ್ಕೇರಿಸಿ ಬಿಟ್ಟನು. ನಿರ್ವಾಹವಿಲ್ಲದೆ ರುಜು ಮಾಡುವಷ್ಟು ಅಕ್ಷರ ಕಲಿತನು ಈ ದಿಲೇರ್‌ಖಾನ. ಅದೂ ಏನು ಬಹಳವಲ್ಲ ಖಾನ್ ಎಂಬುದು ಮಾತ್ರ ಅವನ ದಸ್ಕತ್ತು. ಖಾನ್ ಆಗಾಗ್ಗೆ ಸ್ಟಿಯರಿಂಗ್ ಹಿಡಿದು ಗಿಯರಿಂಗ್ ಬದಲಾಯಿಸಿಕೊಂಡು ಇಡೀ ಬಸ್ಸನ್ನೇ ತೊಳೆಯುವ ಹಳ್ಳದಿಂದ ರಸ್ತೆಯ ವರೆಗೆ ನಡೆಸುವುದನ್ನೂ ಕಲಿತನು.

ಅವನು ಖಾನ ಆಗಲು ಕಾರಣವೇನು? ಯಾರ ಮಗನೋ, ಮಹಾದೇವನ ಯಾವ ಹೆಸರಿನ ಭಕ್ತಿಕಾಸಾರದ ಕಮಲವೋ, ಈಗ ಯಾವ ಮಂದಿರದಲ್ಲಿ ಆ ದೇವನನ್ನು ಕಾಣಬೇಕೋ ಅವನೇ ಅರಿಯನು. ಕಂಡವರು ಇವನ ಚರ್ಯದಿಂದ ಇವನು ಮಹಮದೀಯನಿರಬಹುದೆಂದರು. ಈ ಬಾಲಕನ ದರ್ಪವೇ ಇವನಿಗೆ ಖಾನ ಎಂಬ ಬಿರುದನ್ನು ತಂದುಕೊಟ್ಟಿತು. ಹೆಸರಿಲ್ಲದ ಈ ಮೂರ್ತಿಯು 'ಖಾನ' ಆಗಿಬಿಟ್ಟಿದ್ದನು. ಅಂತು ದಿಲೇರನು ಒಬ್ಬ ವ್ಯಕ್ತಿಯಾದನು.

ಬೀಡಿಯಾಗಲೀ, ಸಿಗರೇಟಾಗಲೀ, ಘನವಾಗಿ ಸೇದಿ, ಗಂಭೀರವಾಗಿ ನಿಂತು ಅದರ ಹೊಗೆಯಲ್ಲಿ ಇಡಿಯ ತನ್ನ ಭವಿಷ್ಯವನ್ನೇ ನೋಡುವಂತೆ ನಿಂತಿರುತ್ತಿದ್ದ. ಹರಕಲು ಪಾಯಿಜಾಮ, ಕೊಳಕಲು ಶರಟು, ಚಂದಿ ಚಿಂದಿ ಕೋಟಾದರೂ ಮೋಟಾರು ಸೀಟಿನ ಬುಡದಲ್ಲಿಟ್ಟು ಇಸ್ತ್ರಿಮಾಡಿಕೊಂಡು ಬಸ್ಸುನಿಂತ ಹೊಸ ಊರಲ್ಲಿ ತಿರುಗುವನು. ಅವನ ಠೀವಿ, ಅವನ ಮಾತು, ಅವನ ರೀತಿಗೆ ಯಾರಾದರೂ ಪ್ರಯಾಣಿಕರು ಬೆರಗಾಗಿ ಅವನ ತಿಂಡಿತೀರ್ಥವೆಲ್ಲ ಜರುಗಿಸಿಬಿಡುತ್ತಿದ್ದರು. ಈ ಹುಡುಗನ ಗುಣಕ್ಕೆ

ಮೆಚ್ಚಿ ಅವನಿಗೆ ಡ್ರೈವಿಂಗ್ ಲೈಸೆನ್ಸ್ ಕೊಡಿಸಿ ಡ್ರೈವರ್ ಪದವಿಗೆ ಏರಿಸಬೇಕೆಂದು ಯಜಮಾನನು ಪ್ರಯತ್ನಪಟ್ಟಾಗ, ಆ ಜಾಗವನ್ನೇ ಬಿಟ್ಟುಕೊಟ್ಟು ಮಾಯವಾದನು: ದಿಲೇರನಿಗೆ ಯಾವ ಬಂಧನವೂ ಸೊಗಸದಿತ್ತು.

ಜನಮೆಚ್ಚಿನ ಹರೆಯನಾಗಿ ಬೆಳೆದ ಈತನು ಒಮ್ಮೆ ವಿಮಾನ ನಿಲ್ದಾಣಕ್ಕೆ ಹೋದನು. ಅಲ್ಲಿ ಆ ದಿನ ಬಹು ಗದ್ದಲ. ಹೋಗಿಬರುವ ಮೋಟಾರುಗಳ ಹೂಂಕಾರಗಳು. ಹ್ಯಾಟೆತ್ತಿ ಇಳಿಸಿ ಕೈಕುಲುಕಿ ಮಾತಾಡಿಸಿ ಓಡಾಡುವವರ ಸಡಗರ. ಖಾನನು ನೋಡುತ್ತ ನಿಂತಿದ್ದವನು, ಅದಾರೋ ಬಂದವರಿಗೆ ಯಾವುದೋ ಧ್ಯಾನದಲ್ಲಿ ಸೆಲ್ಯೂಟ್ ಮಾಡಿದನು. ಆಗ ಹೊಸದಾಗಿ ಕಾರಲ್ಲಿ ಬಂದಿಳಿದಾತ "ವೈ ಹೂಂ ಗುಲಾಮ್ ಷಾ!"

—ಹಾಂ! ಧರ್ದೌಲತ್ ಹೈ!

—ಡೇರ್ ಹೋಗಯಾ!

—ಯೆಸ್!

—ಆಪಕಾ ಅರ್ಜಂಟ್ ಕಾಂ ಹೈ?

—ನೋ!

—ಯೇ ಕಾರ್‌ಮೇ ಬೈಟ್‌ಕರ್........ಜರಾ.......

—ಸೈಡ್‌ಮೇ ಪಾರ್ಕ್ ಕರ್ನಾ?

—ಎಸ್, ಎಸ್, ಗುಡ್ ಯಂಗ್‌ಮ್ಯಾನ್!

—ಥ್ಯಾಂಕ್ಯೂ ಸರ್!

ಖಾನನಿಗೆ ಬಂದಿದ್ದ ಇಂಗ್ಲೀಷೂ ಅಷ್ಟೆ! ಆದರೆ ಕಾರ್ ನಡೆಸುವುದಂತೂ ಚೆನ್ನಾಗಿ ಗೊತ್ತು. ಗುಲಾಮ್ ಷಾ ಬೇಗ ಹಿಂತಿರುಗಿದನು ವಾಡಿಕೆಯಂತೆ ಸ್ಟಿಯರಿಂಗ್ ಚಕ್ರ ಕೈಗೆ ತೆಗೆದುಕೊಳ್ಳಲಿಲ್ಲ. ಏನೋ ಯೋಚಿಸುತ್ತ ಹಿಂದುಗಡೆ ಪೆತ್ತೆಯಲ್ಲಿ ಕುಳಿತುಬಿಟ್ಟರು. ಖಾನ್ ಮಾತಾಡದೆ ಗಾಡಿಯನ್ನು ಹೊರಡಿಸಿದನು. ಒಳ್ಳೇ ಗಾಡಿ ಝುಂ ಎಂತ ಎದ್ದು ಬಿಟ್ಟಿತು. "ಪೋಲೀಸ್ ಹೆಡ್ ಕ್ವಾರ್ಟರ್ಸ್ ಜಾನಾ ಹೈ?" ಎಂದು ಗುಲಾಂಷಾ ಕೇಳುತ್ತಾ ಸಿಗರೇಟ್ ಹಚ್ಚಿಬಿಟ್ಟರು. ಖಾನ್ ಗಾಡಿ ನಿಧಾನಿಸಿದನು. ಗುಲಾಂಷಾ ಕೇಳಿದರು—"ಕ್ಯಾಹೊ?" ನಮ್ಮ ಖಾನನೆಂದನು—"ಲೈಸೆನ್ಸ್ ನೈಹೈ!" ಗುಲಾಂಷಹರಿಗೆ ಆಗ ನೆನಪಾಯಿತು, ಈತನು ಎಂದಿನ ಡ್ರೈವ

ರಲ್ಲವೆಂದು. ಅವರೆಂದರು—"ಪರವಾ ನೈ, ವ್ಯೆ ದಿಲಾತುಂ ಲೈಸೆನ್ಸ್. ಮೆಹೆರ್‌ಬಾನಿಸೆ ಚಲಾವ್ !"

ಗಾಡಿ ಎಲ್ಲೆಲ್ಲೋ ಹೋಗಿ ಏನೇನೆಲ್ಲ ಮಹತ್ತರದ ಕೆಲಸಮಾಡಿಕೊಂಡು ರಾತ್ರಿಗೆ ಹಿಂತಿರುಗಿತು. ಇಷ್ಟು ದಿನಕ್ಕೆ ಈಗ, ಖಾನನಿಗೆ ಮನಸಾಮುಟ್ಟಿ ಆನಂದವಾಯಿತು. ಹೇಗಾದರೂ ಮಾಡಿ ಈ ಕಾರನ್ನು ಬಿಡದಂತೆ, ಇಲ್ಲಿಯೇ ಕೆಲಸಕ್ಕೆ ನಿಲ್ಲೋಣವೆಂದು ಯೋಚಿಸುತ್ತಿರುವಾಗ ಸಾಹುಕಾರರು ಮನೆಯೊಳಕ್ಕೆ ಹೋಗಿ ಹಿಂತಿರುಗಿ ಬಂದು, ಮೋಟಾರೊಳಗಿದ್ದ ಹರೆಯ ಖಾನನನ್ನು ಕೂಗಿ ಕರೆದರು. ದಿಲೇರನು ಒಳಗೆ ಹೋದ ಕೂಡಲೆ, ಒಬ್ಬಳು ಹರೆಯದ ಹೆಣ್ಣು ಟೀ, ಟೋಸ್ಟ್, ಹಣ್ಣುಗಳನ್ನು ತಂದು ಪುಟ್ಟ ಮೇಜಿನ ಮೇಲಿಟ್ಟಳು. ತಿಂಡಿ ತೀರ್ಥವಾದ ನಂತರ ಗುಲಾಂಷಾರು, ಅವಸರದ ಕೆಲಸವಿದೆಯೆಂದು ಹೊರಡುವ ಮುನ್ನ, ತಮ್ಮ ನೆಯ ಆ ಹೆಣ್ಣಿಗೆ ಏನೋ ಹೇಳಿಹೋದರು.

"ಮೇರ ನಾಮ್ ಹೈ ದಿನಾರಿ !"—ಎಂತ ಆ ಹೆಣ್ಣು ಆರಂಭಮಾಡಿ ತನ್ನ ತಂದೆಯ ಹೆಸರನ್ನೂ, ಖ್ಯಾತಿಯನ್ನೂ ವಿವರಿಸಿ ಖಾನನ ಹೆಸರು, ಕುಲಗೋತ್ರಗಳನ್ನು ಕೇಳಿದಳು. ಈ ಹರೆಯನಿಗೆ ತುಂಬಾ ಲಜ್ಜೆ ಆವರಿಸಿತು. ಏನೂ ಹೇಳಲಾರದೆ ಬೆಳಗ್ಗೆ ಬರುವೆನೆಂದು ಹೇಳಿ ಹೊರಬಿದ್ದನು. ಆ ದಿನದ ಊಟ ಕಳೆದಿತ್ತು. ರಾತ್ರಿಗೆ ಠಿಕಾಣಿಯಿರಲಿಲ್ಲ. ಆದುದರಿಂದ ಸ್ವಲ್ಪ ಅಲ್ಲಿ ಇಲ್ಲಿ ಅಡ್ಡಾಡಿ ಬಂದು ಅರ್ಧರಾತ್ರಿ ಸುಮಾರಿಗೆ ಅದೇ ಗುಲಾಂಷಾಹರ ಜಗುಲಿಯಲ್ಲಿದ್ದ ಸೋಫಾದಲ್ಲಿ ಮಲಗಿದನು.

ರಾತ್ರಿ ನಿದ್ದೆಬರಲಿಲ್ಲ. ಪರಪುಟ್ಟನಾಗಿ ಬೆಳೆದವನು ಇಂದು ಯಾವ ಮನೆತನದ ಹೆಸರನ್ನೂ ಅರಿಯದವನಾಗಿದ್ದನು. ಅವನ ಹೆಸರೇ ಅವನಿಗೆ ಅರಿಯದು. ಬೆಳಗ್ಗೆ ಗುಲಾಂಷಾಹ ಸಾಹುಕಾರರು ಕೇಳಿದರೆ ಏನೆನ್ನಬೇಕೆಂದೆಲ್ಲ ಯೋಚಿಸಿದನು. ಬಗೆಹರಿಯಲಿಲ್ಲ. ಆದ್ದರಿಂದ ಹೆಸರೊಂದಾದರೂ ಗಟ್ಟಿಯಾಗಿರಲೆಂದು ಯೋಚಿಸಿ, ದಿನಾರಿಯ ಹೆಸರಿಗೆ ಸಮೀಪವಾಗಿ ತನ್ನ ಮನಸಿದ್ದುದರಿಂದ ದಿಲೇರಖಾನ್ ಎಂತ ಹೇಳಿಕೊಂಡರೆ ಸರಿಹೋಗಬಹುವೆಂದು ಸ್ಥಿರಮಾಡಿ, ಉಳಿದೆಲ್ಲವನ್ನು ಇದ್ದಕ್ಕಿದ್ದಂತೆ ಹೇಳಿದರಾಯಿತೆಂದುಕೊಂಡು, ಕಣ್ಣು ಮುಚ್ಚಿದವನಿಗೆ. ದಿನಾರಿಯ ಕರೆಯಿಂದಲೇ

ಮೂರನೇ ದಿನ ಎಚ್ಚರವಾಯಿತು. ಹರಿಯನಿಗೆ ಇಂಥಾ ಅವಸ್ಥೆಗಳೆಲ್ಲ ಪಾಟವಾಗಿದ್ದರೂ, ಗುಲಾಂ ಸಾಹೇಬರಿಗೂ, ದಿನಾರಿಗೂ, ಈತನನ್ನು ಕಂಡು ತುಂಬಾ ಕನಿಕರಪಡುವಂತೆ ಆಯಿತು.

ದಿಲೇರನು ಗುಲಾಂಷಾಹರ ಮನೆಯಲ್ಲಿ ನೆಂಟನಂತೆ ನಿಂತರೂ, ತನ್ನ ಎಚ್ಚರಿಕೆಯನ್ನು ಬಿಡದೆ ಅಲ್ಪಸ್ವಲ್ಪ ಅಕ್ಷರಾಭ್ಯಾಸ ಮಾಡಿದನು. ಗುಲಾಂಷಾಹರು ದಿಲೇರನನ್ನೂ ದಿನಾರಿಯನ್ನೂ ಕರೆದುಕೊಂಡು ಹಿಂದೂಸ್ಥಾನದ ಅನೇಕ ನಗರಗಳಲ್ಲಿ ವ್ಯಾಪಾರಕ್ಕಾಗಿ ಸಂತಿಸ್ತು ಬರಬೇಕಾಯಿತು. ಅವಕಾಶ ಸಿಕ್ಕಿದಾಗಲೆಲ್ಲ ದಿಲೇರನು ತನ್ನ ಓದಿನ ಜತೆಗೆ ಮೋಟಾರು ಮತ್ತು ವಿಮಾನಗಳ ಒಳಹೊರಗನ್ನೆಲ್ಲ ಅತ್ಯಾಸಕ್ತಿಯಿಂದ ಗಮನವಿಟ್ಟು ನೋಡುತ್ತಿದ್ದನು. ಇದರಿಂದ ಅವನ ಲೋಕಾನುಭವ ಬಳೆಯಿತು.

ಗುಲಾಂಷಾಹರು ತಮ್ಮ ದೇಶಕ್ಕೆ ಹಿಂತಿರುಗಿದರು. ತಮ್ಮ ಸ್ವಂತ ಮನೆಯಲ್ಲೇ ನಿಂತರು. ಆದರೆ ದಿಲೇರನಿಗೆ ಏನುಮಾರ್ಗ ತೋರಿಸಬೇಕೆಂದು ಅರಿಯದಾದರು. ಅವರ ಮಗಳೂ ಹರಿಯನೂ ಇದುವರೆಗೂ ಕೇವಲ ಅವ್ಯಾಜ ಮೈತ್ರಿಯಲ್ಲಿ ಬೆಳೆದವರು. ಈಗ ಅವರನ್ನು ಬೇರೆಮಾಡುವುದು ಸರಿಯಲ್ಲ. ಅವರೀರ್ವರಿಗೆ ವಿವಾಹ ಸಂಬಂಧವಾದರೆ ಹೇಗಾದೀತು? ಮತ್ತು ಆತನಿಗೆ ಸರ್ಕಾರಿಯ ಕೆಲಸವೊಂದನ್ನು ಕೊಡಿಸಿದರೆ ಸರಿಹೋದೀತೆ ಎಂದು ಯೋಚಿಸಿದರು.

ಕೆಲವುದಿನಗಳನಂತರ ದಿನಾರಿಯು ಇಷ್ಟದಂತೆ ದಿಲೇರನ ಸಂಗಡ ವಿವಾಹವಾಯಿತು. ದಿಲೇರನ ಇಷ್ಟದಂತೆ ಪೋಲೀಸು ಇಲಾಖೆಯಲ್ಲಿ ಕೆಲಸವಾಯಿತು. ದಿಲೇರನಿಗೆ ಮೊದಲಿಂದ ಪೋಲೀಸು ಇಲಾಖೆಯಲ್ಲಿ ಬಹಳ ಗೌರವಿದ್ದುದರಿಂದ, ಅಲ್ಲಿ ಕಾನ್ಸ್ಟೆಬಲ್ ಆದರೂ ಆಗಿರಲು ಒಪ್ಪಿದನು. ಗುಲಾಂಷಾಹ ಹಿರಿಯ ನೌಕರರಿಗೆಲ್ಲ ಗೌರವದ ಗೆಳೆಯನಾಗಿದ್ದನು. ಆತನ ಮಾತು ನಡೆಯುವಂತಿತ್ತು; ಆದುದರಿಂದ ದಿಲೇರನನ್ನು ಟ್ರಾಫಿಕ್ ಕಂಟ್ರೋಲ್ ಮಾಡುವ ಕೆಲಸದಲ್ಲಿ ನಿಯೋಗಿಸಬೇಕೆಂದು ಕೇಳಿಕೊಂಡಿದ್ದನು. ಕಾರಣವಿಷ್ಟೆ-ಚೌಕದಲ್ಲಿ ಅವನು ಸಂಚಾರೀ ವಾಹನಗಳ ಮೇಲೆ ಎಚ್ಚರಿಕೆಯಿಟ್ಟು ಕೆಲಸಮಾಡುವುದನ್ನು, ಯಾವಾಗಲಾದರೂ ನೋಡುತ್ತಿರಬಹುದೆಂದೂ ಮತ್ತು ಅಧಿಕಾರಿಗಳ ಕಣ್ಣಿಗೆ ಅವನು ಬೀಳು

ತ್ತಿರುವನೆಂದೂ ಹಾಗಾದರೆ ದಿಲೇರನ ಭವಿಷ್ಯದ ಆಗುಹೋಗುಗಳಿಗೆ ಅನುಕೂಲವೆಂದೂ ಭಾವಿಸಿದ್ದರು.

ದಿನಾರಿಯು ಇಷ್ಟದಂತೆ ಗುಲಾಂಷಾಹರ ಬಂಗಲೆಗೆ ಸ್ವಲ್ಪ ದೂರದಲ್ಲಿ ಪುಟ್ಟಮನೆ ಬಾಡಿಗೆಗೆ ತಗೆದುಕೊಂಡು ಅಲ್ಲೊಂದು ಪುಟ್ಟ ಸಂಸಾರ ಹೂಡಿಯಾಯಿತು. ಅದೇ ಸಂಸಾರ ಪಾತೆಯಲ್ಲಿ ಪುಟ್ಟದಾದ ಒಂದು ಗುಲಾಬಿಯು ಉದ್ಭವವಾಗಿ "ಘೋಬಿ" ಎಂಬ ಹೆಸರಿಗೆ "ವಿಾ" ಎನ್ನುತ್ತಿತ್ತು.

"ಘೋಬೀ"ಮಾಡದ ತುಂಟತನವಿಲ್ಲ. ಒಂದು ದಿನ ಪೋಲೀಸ್-ಪೇಟ ಬಿಚ್ಚಿ ಅದರಮೇಲೆ ಜೇನುತುಪ್ಪ ಸುರಿದು, ಸಿಹಿಯೋ ನೋಡೆಂದು ಅಪ್ಪನ ಬಾಯಿಗೆ ತುರುಕಿತ್ತು. ಆ ದಿನ ಅಪರಾನ್ಹ ಮೂರು ಗಂಟೆ ಹೊಡೆದಾಗಿತ್ತು. ಸರ್ಕಲ್ ಡ್ಯೂಟಿಗೆ ಪುನಹಾ ಬರಬೇಕೆಂದು ಕರೆ ಬಂದಿತ್ತು. ಹೇಗೆ ಹೋಗುವುದು? ಪೋಲೀಸು ಇಲಾಖೆಯಲ್ಲಿ ನಿರ್ಬಂಧ ಬಹಳ. ಹೇಳಿದ ತಕ್ಷಣವೇ ಹುಕುಂ ಪಾಲಿಸಬೇಕು. ಅವರ ಈಗ ಸರಿಯಾದ ಡ್ರೆಸ್ಸೇ ಇರಲಿಲ್ಲ.

"ಅಯ್ಯೋ ಏನುಮಾಡಿದೆಯೋ ಘೋಬಿ!" ಎನ್ನುತ್ತ ದಿಲೇರ ಅಳಲಾರಂಬಿಸಿಬಿಟ್ಟ. ಆಗ ಯಾವನಾದರೂ ಅಗಸನನ್ನ ಹುಡುಕಿ ಪೇಟಾ ಒಗೆಯಿಸಿ ಅನಂತರ ಇಸ್ತ್ರಿಮಾಡಿಸಿ ಮತ್ತದನ್ನು ಯಾರ ಕೈಲಾದರೂ ಸುತ್ತಿಸಿಕೊಂಡು ಬರಬೇಕಾಗಿತ್ತು. ಈ ದಿನ ಹೊರಗಿನಿಂದ ಬರುವ ಅಧಿಕಾರಿಗಳ ಸಂಗಡ ಯಾರು ಯಾರು ಹಿರಿಯರೆಲ್ಲ ಓಡಾಡುವರೋ ಕಾಣದಾಗಿತ್ತು. ಸ್ವಯಂ ಗುಲಾಂಷಾಹರೇ ಬರಬಹುದು. ಏನುಮಾಡಿದರೆ ಸರಿಹೋದೀತೆಂದು ಪರದಾಡುತ್ತಿದ್ದಾಗ, ದಿನಾರಿಯು ಒಂದು ಸಲಹೆ ಕೊಟ್ಟಳು. ಆಗ ದಿಲೇರನು ಸ್ವಲ್ಪ ತೃಪ್ತನಾಗಿ ಅಗಸನ ಮನೆಗೆ ತೆರಳಿದನು—ಪೇಟದ ಪುನರವತಾರಕ್ಕೆ.

ಇತ್ತ ದಿನಾರಿಯು ಸರ್ಕಲ್ ಡ್ಯೂಟಿಗೆ ಇನ್ಯಾರನ್ನಾದರೂ ಕಳುಹಿಸೋಣವೆಂದು ತನ್ನ ನೆರೆಹೊರೆಯವರನ್ನೆಲ್ಲ ವಿಚಾರಿಸಿದಳು. ಸರ್ಕಲ್ ಸರದಾರರು ಯಾರೂ ಇರಲಿಲ್ಲ. ಇದ್ದವರೂ ಮನೆಯಲ್ಲಿರಲಿಲ್ಲ. ಆಗ ದಿನಾರಿಯು ತನಗಾಪ್ತಳಾದ ಬೀಬಿಯೊಬ್ಬಳ ಬಳಿ ಘೋಬಿಯನ್ನು ಬಿಟ್ಟು

ತನ್ನಾತನ ಬಟ್ಟೆಗಳನ್ನು ಗಂಟುಕಂಟಿಕೊಂಡು ಹುಕುಂ ಕಾಗದವನ್ನು ಕೈಗೆ ತೆಗೆದುಕೊಂಡು ತಂದೆಯ ಮನೆಗೆ ವೇಗವಾಗಿ ಹೋದಳು.

ಅಲ್ಲಿ ಅವಳಿಗೆ ಹಿಡಿತಡೆಯಿಲ್ಲ. ಅಲ್ಲಿ ಒಳಗೆಹೋಗಿ ಮೈತೊಳದು, ಸಂಜೆಯ ಸೂರ್ಯನ ಕಡೆ ತಿರುಗಿ, ನಮಾಜ್‌ಮಾಡಿ ಖುದಾ ಗಂಡಾಗುವ ಶಕ್ತಿಕೊಡೆಂದು ಬೇಡಿಕೊಂಡು ಗಂಡನ ಪೋಷಾಕನ್ನು ಧರಿಸಿ, ಅದರ ಮೇಲೆ ತನ್ನ ಕೂದಲನ್ನೂ ಹಣೆಯನ್ನೂ ಮುಚ್ಚುವಂಥ ಹ್ಯಾಟೊಂದನ್ನು ಇಟ್ಟುಕೊಂಡು ಹೊರಟಳು.

ಸರ್ಕಲ್ಲಿಗೆ ತಲುಪುವ ವೇಳೆಗೆ ಡ್ಯೂಟಿ ಸಮಯ ಮೀರಿತ್ತು. ಯಾರೋ ಹೊಸ ಕಾನ್‌ಸ್ಟೆಬಲ್ಲೋ ಏನೋ, ಎಂದುಕೊಂಡು ಅಲ್ಲಿದ್ದವನು ಆರ್ಡರ್ ಚೀಟಿನೋಡಿ ದಾರಿಕೊಟ್ಟು, ಸೀಟಿಹಾಕುತ್ತಾ ಬೀಡಿ ಹಚ್ಚಿಕೊಂಡು ಸಂತೋಷವಾಗಿ ಹೊರಟುಹೋದನು.

ಸಂಜೆ ಆರರಿಂದ ಏಳರವರೆಗೆ ನಿಲ್ಲುವುದೇ ಕಷ್ಟವಾಯಿತು. ಬೂಡ್ಸು ಕಚ್ಚಿದ ನೋವೂ, ಸೀರೆಯಮೇಲೆ ಡ್ರೆಸ್‌ಹಾಕಿದ ಸೆಖೆಯೂ, ಕೈ ಅಲುಗಾಡಿಸಿದ ದಣಿವೂ ಬಹಳವಾಗಿತ್ತು. ಆಗಲೇ ಬರಬೇಕೇ ಪೋಲೀಸ್ ಸೂಪರ್‌ಇಂಟೆಂಡೆಂಟ್, ತನ್ನ ತಂದೆ ಗುಲಾಂಷಾಹರ ಸಂಗಡ! ಕಾರು ಬಿಟ್ಟುಕೊಂಡು ಹೋದವರು ಸ್ವಲ್ಪ ದೂರದಲ್ಲಿ ನಿಂತು "ಹ್ವಿಸಲ್" ಮಾಡಿದರು. ಸೂಪರ್ ಆಫೀಸರು ಪೀಪಿ ಊದಿದರೆ ಹೋಗಬೇಕೆಂದೇನೊ ಈಕೆಗೆ ಗೊತ್ತು, ಆದರೆ ಹೋಗುವುದು ಹೇಗೆ? ಆ ಸರ್ಕಲ್ ಗದ್ದುಗೆ ಬಿಟ್ಟರೆ ಅವಳು ಗಂಡಾಳಲ್ಲ—ಈ ನೂತನ ಪೋಲೀಸ್! ಇನ್ನೊಮ್ಮೆ "ಹ್ವಿಸಲ್‌ಮಾಡಿ" ಸೂಪರ್‌ಇಂಟೆಂಡೆಂಟರೇ ಕಾರಿಳಿದು ಬಂದರು. ಪೋಲೀಸ್ ವೇಶದ ದಿನಾರಿಯು ತನ್ನ ಮನಸ್ಸಿಗೆ ತುಂಬ ಧೈರ್ಯಹೇಳಿಕೊಂಡು, ದೇಹವನ್ನು ಹತೋಟಿಗೆ ತಂದುಕೊಂಡು ಗದ್ದುಗೆಯ ಒಂದು ಹಂತ ಇಳಿಯುವವೇಳೆಗೆ ಆಫೀಸರ್ ಬಂದೇಬಿಟ್ಟರು ಅಲ್ಲಿಗೆ!

ದಿನಾರಿ ತನ್ನ ತಂದೆಯನ್ನು ನೆನೆದುಕೊಂಡು ನೆಟ್ಟಗೆನಿಂತು ಸೆಲ್ಯೂಟ್ ಹೊಡೆದು ಜೇಬಿನಿಂದ ತೆಗೆದು ಆರ್ಡರ್ ಕಾಗದವನ್ನು, ಅವರ ಮುಂದೆ ಹಿಡಿದಳು ಹ್ಯಾಟೊಂದು ಜಗುಲಿಯ ಟೋಪಿಯಾಗಿದ್ದುದರಿಂದ ದಿನಾರಿಯು ಕಾಡಿಗೆ ಕಣ್ಣಾಗಲೀ ಹಣೆಯಾಗಲೀ ಆಫೀಸರಿಗೆ ಕಾಣಿಸಲಿಲ್ಲ. ಆದರೆ

ಆಗತಾನೆ ಶರಟು ತೋಳಿನಿಂದ ನುಸುಳಿಕೊಂಡು ಬಂದು ಕರೀಪಟ್ಟಿ ಬಳಿ ಯೊಂದು ಮುಂಗೈಮೇಲೆ ತುಂಟ ಧೋಬಿಯು ಹಾಗೆ ನಿಂತಿತು. ಆಫೀಸರು ಆ ತುಂಟಬಳಿಯನ್ನು ನೋಡದಿರಲಿಲ್ಲ, ದಿನಾರಿಯು ತನ್ನ ಕಂಬದ ಬಳಿಗೆ ತಿರುಗಿಬಂದು, ಒರಗಿನಿಂತು, ಆ ಬಳಿಗೆ ಒಂದು ಮುತ್ತುಕೊಟ್ಟು ತೋಳಿ ನೊಳಕ್ಕೆ ನೂಕಿಬಿಟ್ಟು, ನೆಟ್ಟಗೆನಿಂತು ಸಲಾಂ ಮಾಡಿದಳು........

ಇತ್ತ ಸೂಪರ್ ಸಾಹೇಬರು ಕಾರೊಳಗೆ ಹೋಗುತ್ತಿರುವಾಗ ಹೀಗೆಂಪರು—"ಗಲ್ತಿ ಹೋಗಯಾ! ಏಬೀ ಎಕ್ ಸಿಕ್ ಪೀ. ಸೀ. ಹೈ? ನೈತೋ ಏ ಕೋನ್!"—ಕಾರು ಹೊರಟುಹೋಯಿತು. ಇತ್ತ ಇನ್ನೊಬ್ಬ ಕಾನ್ಸ್ಟೇಬಲ್ ಬರುತ್ತಿರುವುದನ್ನು ಕಂಡು ದಿನಾರಿಯು ತನ್ನ ಮನೆಗೆ ಹೊರಟಳು. ಹೊಸಬನು ಸರ್ಕಲ್ ಮೂರನೇ ರಾಜನಾದನು.

ಇತ್ತ ದಿಲೇರನು ಮನೆಗೆ ಬಂದು, ನೆರೆಮನೆಯಿಂದ ಧೋಟೀ ಗುಲಾಬಿಯನ್ನು ತಂದಿಟ್ಟುಕೊಂಡು ದಿನಾರಿಗಾಗಿ ಕಾದನು. ತನ್ನ ಡ್ರೆಸ್ಸಿ ಗಾಗಿ ಹುಡುಕಿದನು ಅಯ್ಯೋ ಇನ್ನೇನುಗತಿ ಇವಳೆಲ್ಲಿ ತನ್ನನ್ನು ಹುಡುಕುತ್ತ ಅಗಸನ ಮನೆಗೆ ಹೋದಳೋ ಎಂದು ಮನದಲ್ಲಿ ಕುದಿಯುತ್ತ ಕುಳಿತಿದ್ದನು.

ಆಗ ಬಾಗಿಲಲ್ಲಿ ಯಾರೋ ಕೂಗಿದರು. ಮಬ್ಬು ಮಬ್ಬು, ರಾತ್ರಿಯ ಮುಂದಿನ ಮಂಕು ಮಬ್ಬು. ದನಿಯು ಪರಿಚಯವಾಗುವಂತಿದ್ದರೂ ಹ್ಯಾಟ್‌ವಾಲ ಹೊಸವ್ಯಕ್ತಿ.

"ಕೋಣ್ ಹೈ ಘರ್‌ಮೇ! ದಿಲೇರ್ ಹೈ ಘರ್‌ಮೇ? ಉನ್‌ಸೇ ಬೋಲೋ ಅಬ್ಬೀಚ್ ಜಾನಾಪಡ್‌ತಾಹೈ, ಸರ್ಕಲ್‌ಕೇಪಾಸ್........ ಸೂಪರ್ ಸಾಹೇಬ್!........"ಈ ಮಾತುಗಳನ್ನು ಕೇಳಿದೊಡನೆಯೋ ಒಳಗಿನ ಶಬ್ದವೆಲ್ಲ ನಿಂತುಬಿಟ್ಟಿತು.

ಹೊಸ ವ್ಯಕ್ತಿಯು ಒಳಗೆ ಕಾಲಿಟ್ಟಿತು. ಧೊಬಿ ದುರದುರ ನೋಡಿ ಆ ವ್ಯಕ್ತಿಯ ಕಾಲುಗಳನ್ನು ಅಪ್ಪಿಕೊಂಡು "ಮಾ, ಮಾ," ಎಂದು ಕೂಗಿ ಕೊಂಡಿತು.

ಪೋಲೀಸು ವೇಶಧಾರಿಯು ಮಗುವನ್ನು ಎತ್ತಿಕೊಂಡು ಅಡುಗೆ ಕೋಣೆಯ ಬಾಗಿಲಿಗೆ ಹೋಗಿ ನಿಂತಿತು. ಒಳಗೆ ನಿಶ್ಯಬ್ಧ, ಮಗು ಧೋಟೀ ಗುಲಾಬಿಯು ಕೊಂಕುಳಿಂದ ಇಳಿದುಹೋಗಿ ಒಳಗಿದ್ದ ವ್ಯಕ್ತಿಯನ್ನು ಹಿಡಿ

ದೆಳೆದು ತಂದಿತು. ಆತ ತಲೆತಗ್ಗಿಸಿಕೊಂಡಿದ್ದನು. ಭೋಬಿಯು ಪುನಹಾ ಹೊಸವೇಶಧಾರಿಯ ಮೈಮೇಲೆ ಹತ್ತಿ ತಲೆಯಮೇಲಿನ ಹ್ಯಾಟನ್ನು ತಾನಿಟ್ಟುಕೊಂಡಿತು. ಆಗ ಕಿಲಕಿಲ ನಗುವಿನ ಶಬ್ದ ಕೇಳಿತು.

ದಿಲೇರನು ತಲೆಯೆತ್ತಿನೋಡುತ್ತಾನೆ. ಎದುರಲ್ಲಾರು? ಇನ್ನಾರು —ದಿನಾರಿನೂರ್! ಆಗ ಆತನಿಗೆ ಆಗಿದ್ದ ಭಯವೆಲ್ಲ ಕರಗಿಹೋಗಿ ಆನಂದದ ಹೊಳಹಿಟ್ಟಿತು.

ಹೀಗೆ ದಿನಾರಿಯು ತನ್ನ ಗಂಡನ ಸೇವೆಮಾಡಿ, ಅತನ ಗೌರವವನ್ನು ಉಳಿಸಿದಳು........

ಕೊಂಚಕಾಲವಾದನಂತರ ದಿಲೇರಖಾನನಿಗೊಂದು ಪತ್ರ ತಲುಪಿತು. ಅದರಲ್ಲಿ :—

"ದಿಲೇರ, ನೀವಿಬ್ಬರೂ ಆನಂದವಾಗಿದ್ದೀರಿ. ನನಗೆ ಅಷ್ಟೇ ಬೇಕಾಗಿತ್ತು. ನಾನು ಇನ್ನುಮುಂದೆ ಪರದೇಶಗಳಿಗೆ ಹೋಗಬೇಕಾಗಿದೆ. ನೀನೂ ದಿನಾರಿಯೂ ಇಲ್ಲೇಬಂದು ನಿಲ್ಲಬೇಕು. ಈ ಬಂಗಲಿಯೆಲ್ಲ ನಿಮ್ಮದು ನಾನೂ ನಿಮ್ಮವನೇ ಆಗುತ್ತೇನೆ—ನೀವಿಬ್ಬರೂ ಒಪ್ಪಿದರೆ ನೀನಿನ್ನು ಪೋಲೀಸ್ ನೌಕರಿಯಲ್ಲಿರಬೇಕಾಗಿಲ್ಲ. ನಾಳೆ ಶುಕ್ರವಾರ ನಿನ್ನ ಡ್ಯೂಟೀ ಮುಗಿಸಿ, ನಾನು ಕಳುಹಿಸಿರುವ ಈ ಹೊಸ ಬಟ್ಟೆಗಳನ್ನು ಧರಿಸಿ, ಮನೆಯಲ್ಲಿ ನಮಾಜ್‌ಮಾಡಿ ಆಫೀಸಿನಲ್ಲಿ ನಿನ್ನ ಹಿರಿಯಧಿಕಾರಿಗಳಿಗ ಹೇಳಿ ಹೊರಟುಬಾ, ನಿನಗೆ ಇಷ್ಟವಿದ್ದರೆ, ಒಂದು ಆಕಾಶವಿಮಾನವನ್ನೇ ಕೊಂಡುಕೊಳ್ಳುವಿಯಂತೆ, ನನ್ನ ಸಂಗಡ ಪ್ರಪಂಚದಲ್ಲೆಲ್ಲ ತಿರುಗಿಬರುವೆಯಂತೆ, ದಿನಾರಿಯನ್ನು ಮಾತ್ರ ನೋಯಿಸಬೇಡ. ಅವಳು ತಾಯಿಯನ್ನೇ ಕಂಡರಿಯಳು, ಅವಳೊಂದು ದಡ ಹತ್ತಿದುದನ್ನು ಕಾಣಬೇಕೆಂದಿದ್ದ ನನ್ನಾಸೆ ಪೂರೈಸಿತು. ಛೋಟೀ ಗುಲಾಬೀ ಎದುರಿಗಿದ್ದರೆ ನನಗೆ ಪರಮಾನಂದ. ನನ್ನ ಐಶ್ವರ್ಯ ನಿನ್ನದು. ನಿಮಗೆ ಇನ್ನುಮುಂದೆ ಬದುಕಿಬಾಳಲು ತುಂಬಾ ದಿನಗಳಿವೆ. ಖುದಾ ನಿಮಗೆ ಪರೋಪಕಾರದಲ್ಲಿ ಮನಸ್ಸು ಕೊಡಲಿ." ಈ ಕಾಗದವನ್ನು ಓದಿಕೊಂಡವರು, ಅವರಿಬ್ಬರೂ ಗುಲಾಂಷಾಹರ ಬಂಗಲಿಗೆ ಶುಕ್ರವಾರ ಸಂಜೆ ತಲುಪಿದರು.

ಬಡವರ ಬಡತನದ, ಪಾಪಿಗಳ ತಬ್ಬಲಿತನದ, ಕುಂದುಕೊರತೆಗಳನ್ನು ಅರಿತವನಾದ ದಿಲೇರಖಾನನು ಅಲ್ಲಿ ವಾಸವಾಗಿದ್ದಾನೆ. ಅದೇ ಮನೆ! ಹಸಿದವರು ನೊಂದವರು ಅಲ್ಲಿಗೆ ಹೋಗಿ! ಅಲ್ಲಿ ಕಚ್ಚುವ ನಾಯಿಗಳಿಲ್ಲ! ಇದೇ ಅವರ ಮನೆಯ ತಂತಿ ವಿಳಾಸ :—

"ಮಹಲ್ ದಿನಾರಿ ಗುಲಾಂ."



# ೨. ಸ್ಪ್ರಿಂಗ್

[ಗಿರಿಯಪ್ಪ ಗೋವಿಂದ ಮುದ್ರಣಾಲಯಕ್ಕೆ ಬರುತ್ತಾನೆ. ಮುದ್ರಣಾಲಯು ಪಲ್ಲಿ ಟೆಲಿಫೋನು ಮೊದಲಾಗಿರುವ ಆಫೀಸು. ಹೆಸರಿನ ಹಲಗೆ ದೊಡ್ಡದಾಗಿರುತ್ತೆ. ಅದನ್ನು ಓದುತ್ತಾ ಒಳಗೆ ಬರುವನು.]

ಗಿರಿಯಪ್ಪ:—ಇದೇನೆ, ಗೋವಿಂದ ಮುದ್ರಣಾಲಯು! ಯಾಕೇಂದೆ ಇಷ್ಟು ದೊಡ್ಡ ಬೋರ್ಡು ಈ ಪ್ರೆಸ್ಸಿಗೆ ಓಹೋ, ನೆನೆದವರ ಮನದಲ್ಲೆ. ಬಂದೆಯ ಗೋಂದು, ಗೋಂದಪ್ಪ, ಇದೇನು ಇಲ್ಲೇ ಇದ್ದುಬಿಟ್ಟದ್ದಿ? ಯಾಕೆ ತಪ್ಪಿಸಿಕೊಳ್ಳುವುದಕ್ಕೆ ಗಂಟೆ ಗೊತ್ತಾಗಲಿಲ್ಲವೆ.

ಗೋವಿಂದಪ್ಪ:—ಏನೋ ಗಿರಿಯಪ್ಪ ನೀನೂ ಬಂದು ಹಾಸ್ಯಮಾಡು ತೀಯ? ಮೊಳೆ ಜೋಡಿಸುವರಿಲ್ಲ, ಮಿಷನ್ ತುಳಿಯುವರಿಲ್ಲ, ಬಂದು ಹೋಗುವ ಜನ ಬಹಳ ಹೆಚ್ಚಾಯ್ತು. ಸುಳ್ಳೇ ಹೇಳಬಾರದು ಎಂತ ನನ್ನ ಹಟ. ಈ ಗಡಿಯಾರ ಸರಿಯಾಗಿದ್ದರೆ ಅದಾದರೂ ಎಚ್ಚರಿಕೆ ಕೊಡು ತಿತ್ತು. ನಿನ್ನೆ ನಿಂತು ಹೋಯಿತು. ಸರಿಮಾಡಿಕೊಡೊ ನಿನ್ನ ಗುಮಾ ಸ್ತಗಿರೀ ಲೇಖಣೀನ ಹಾಗಿಟ್ಟು. ಹೀಗೆ ಬಾ, ಇಕ್ಕುಳ ಹಿಡಿದು ನನ್ನ ಕಾಲದ ಕೂಸಿಗೆ ಜೀವಕೊಡು. ನೀ ಕೇಳಿದ್ದೆಲ್ಲ ಕೊಡುತೇನಯ್ಯ. ಏನೋ ಗಿರಿ!

ಗಿರಿಯಪ್ಪ:—ಹಾಗೆ ಬಾ ತಮ್ಮ! ಮಾಡಿಕೊಡೋಣಂತೆ ಗಡಿ ಯಾರದ ರಿಪೇರಿ. ಆದರೆ ಮೊದಲು ಹೇಳು, ನನ್ನಾಕೆ ಪುಸ್ತಕ ಏನಾಯ್ತು, ಎಲ್ಲಿಗೆ ಬಂತು, ಅದು ಈ ದಿನವೇ ಬೇಕಂತೆ. ಅಚ್ಚುಮಾಡ

ದಿದ್ದರೆ ಅಷ್ಟೇ ಹೋಯ್ತೋ ಅಚ್ಯುತಾ, ನೀನು ಥೇಟು ಗೋಂದು ಕಣೊ ಗೋಂಮು, ಬ್ಯಂಕ, ಅಂಟು! ನಿನ್ನ ಬಲೆ ಒಳಗೆ ಕಾಲಿಟ್ಟು ಕೆಟ್ಟಿನಾನು. ನನ್ನ ಜೀವ ಇಲ್ಲಿ ನೀನು ಹೀರುತಿ ಅಲ್ಲಿ ನನ್ನ ಮಾನ ಆಕೆ ಹಿಂಡುತಾಳೆ. ಚಂದ್ರಾವಳಿ ಇಷ್ಟು ಹೊತ್ತಿಗೆ ಅಚ್ಚಾಗಿದ್ದರೆ ಸಾವಿರಾರು ಪ್ರತಿ ಖರ್ಚಾಗಿ ಹೋಗುತಿತ್ತು. ಅದಿರಲಿ ಗಡಿಯಾರ ಯಾವದು, ರಿಪೇರಿಗ ಏನು ಕೊಡುತಿ? ಅದರ ರಿಪೇರಿ ಛಾರ್ಜು ಮಾತ್ರ ನಂದಲ್ಲ. ಅದೇ ಬೇರೆ ಲೆಕ್ಕ ನೋಡಪ್ಪ.

ಗೋವಿಂದಪ್ಪ:—ಅದೇನು ಸ್ತ್ರೀ ಧನವೋ! ಹಾಗೇ ಆಗಲಿ: ಧಾರಾಳವಾಗಿ ಕೊಡೋಣ. ಹದಿನೈದಲ್ಲ, ಇಪ್ಪತ್ತು ರೂಪಾಯಿ ತಗೊಳ್ಳಯ್ಯ. ಅದಕೆಲ್ಲ ತಗಲುವಷ್ಟು ಶಕ್ತಿವರ್ಧಕವೆಲ್ಲ ನಾನೇ ಒದಗಿಸಿಬಿಡುತೇನಯ್ಯ. ಒಂದೇ ರಾತ್ರೀಲಿ ಗಡಿಯಾರ ಸರಿಮಾಡಿ ವಾಪಸುಮಾಡು ನಿನ್ನ ದಮ್ಮಯ್ಯ.

ಗಿರಿಯಪ್ಪ:—ನಿನ್ನ ಕೆಲಸಾಂದರೆ, ಅದೇನೆಲ್ಲ ದಮ್ಮಯ್ಯಗುಡ್ಡೆ ಹಾಕುತೀಯೋ ಗೋಂದೂ! ನನ್ನಾಕೆ ಪುಸ್ತಕ ನಿನ್ನೀ ಪ್ರೆಸ್ಸಿಗೆ ಬಂದು ಎಷ್ಟು ದಿನವಾಯ್ತೊ ಹೇಳು ನೋಡೋಣ. ಬಂದ ಬಂದಾಗೆಲ್ಲ ಮುದ್ದು ಮುದ್ದಾಗಿ ಮಾತಾಡುತಿ. ಗೊಂದು ಎಂದರೆ ಗೋಂದೇ ನೀನು!

ಗೋವಿಂದಪ್ಪ:—ಲೋ ಗಿರಿ ನೀನಿಲ್ಲದೆ ಇದ್ದರೆ ನಾನೆಲ್ಲೋ! ಗಿರಿಯಿದ್ದರೆ ಗೋವಿಂದ ಅಲ್ಲವೆ? ನಿನ್ನ ಹತ್ತಿರ ಒಂದಾದರೂ ಸರಿಯಾದ ಸುಳ್ಳು ಹೇಳಿದ್ದೇನೆಯೆ?

ಗಿರಿಯಪ್ಪ:—ಓಹೋಹೋ! ಒಂದೇ ಎರಡೇ ಬಗೆ ಸುಳ್ಳು? ನೂರೆಂಟುಬಗೆ ಸುಳ್ಳಿವೆ ನಿನ್ನಲ್ಲಿ. ಪ್ರಸ್ಥಾಯಾಥ ಪ್ರೆಸ್ಸು ಮಾಲೀಕವದನೇ ಸಾನಂದಮಾಸ್ತೇನೃತಂ—ಎಂದೇ ಇರಬೇಕಾಗಿತ್ತು. ಆ ಸುಳ್ಳಿನ ಮೇಲೆ ಬರೆದಿರುವ ಆ ಶ್ಲೋಕದ ಕಡೆಯ ಸಾಲು.

ಗೋವಿಂದಪ್ಪ:—ಲೋ ಗಿರಿ! ಅಂತು ನಿನ್ನ ಚಂದ್ರಾವಳಿ ಮುಟ್ಟಿದ್ದಕ್ಕೆ ನನ್ನ ಕೊರಳಿಗೆ ಅನೃತಾವಳಿ ನೇತು ಹಾಕಿಬಿಟ್ಟೆ! ನಂದೇ ತಪ್ಪೋ ಅಥವ ನನಗಿರುವ ಸಾವಿರ ತೊಂದರೆಯ ತಪ್ಪೊ. ಕ್ಷಮಿಸಯ್ಯ, ತಪ್ಪಾಯಿತಯ್ಯ!

ಗಿರಿಯಪ್ಪ:—ಇರಲಿ! ಟೆಲಿಫೋನು ಬಳಿ ನಡಿ, ಈದಿನ ನಮ್ಮ ಕೂಸಿಗೆ ಹುಟ್ಟಿದ ಹಬ್ಬ. ಈಗಾಗಲೇ ಎಷ್ಟೋ ಹೊತ್ತಾಗಿ ಹೋಗಿದೆ. ಬೇಗಬೇಗ ಹೋಗಬೇಕು ಮನೆಗೆ. ನಿನ್ನ ಹತ್ತಿರ ಏನಾದರೂ ಕಾಂಚಾಣ ಇದ್ದರೆ ಕೊಡೋವ್ಮ. ಮನೆಗೆ ಹೋಗೋಣ ನೇವೇದ್ಯಕ್ಕೆ, ರಥ ತರಿಸೋಣ!

ಗೋವಿಂದಪ್ಪ:—ಒಂದು ಬಿಡಿಕಾಸಿಲ್ಲ! ವಿಷ ತಗೊಳ್ಳೋಕ್ಕೂ ಕಾಸಿಲ್ಲ! ನನ್ನ ಮುದ್ರಾಲಯದಲ್ಲಿರೋ ದೇವತೆಗಳಿಲ್ಲ ನೈವೇದ್ಯ ಕಾಣಿಕೆ ಇಲ್ಲಾಂತ ನನ ಮೋರೆಗೆ ಮಂಗಳಾರತಿ ಮಾಡಿದ್ದು ನೀನು ನೋಡಲಿಲ್ಲ ವೇನೋ! ಹೋಗಲಿ, ನಿನ್ನ ಕೂಸಿನ ನಾಮಧೇಯ! ವರ್ಧಂತಿಮಾಡಿಸಿ ಕೊಳ್ಳೋ ಪುಟ್ಟ ಬುದ್ಧಿಯುವರ ನಾಮಕರಣವೇನೊ?

ಗಿರಿಯಪ್ಪ:—ರೇಡಿಯೋ ಕಣಯ್ಯ ಅದರ ಹೆಸರು! ಅದು ಹುಟ್ಟಿದ ಮೇಲೆ ನಮ್ಮಿಬ್ಬರ ಸದ್ದೂ ಉಡಿಗಿಹೋಯ್ತು. ಅದರದೇ ಸದ್ದು ಎಲ್ಲೆಲ್ಲೂ ಯಾವಾಗಲೂ!

ಗೋವಿಂದಪ್ಪ:—ಹಾಗಾದರೇನು, ಒಂದೊಂದು ಸಾರಿ ರಾಗಹಿಡಿ ದರೂ ಒಂದೊಂದು ದೇಶದ್ದೇನು ಒಳ್ಳೇ ಹೆಸರು ಹಾಹಾಹಾ! ರೇಡಿಯೊ! ಹಾಹಾಹ!

ಗಿರಿಯಪ್ಪ:—ನಿನ್ನೂ ಈದಿನ ಕರಕೊಂಡು ಹೋಗುತೇನೆ! ಅದೇ ಶಿಕ್ಷೆ ನಿನಗೆ! ನೀನು ಬೇಡಾಂದರೆ ಬಿಡೆ! ನನ್ನ ರೇಡಿಯೋ ಕೂಸನ್ನೂ ನೋಡು, ಅದರ ಒಡತೀನೂ ನೋಡು. ನಿನ್ನ ಸಮಾಧಾನದ ಮಾತೆಲ್ಲ ಅದೇನಿದೆಯೋ ಅದೆಲ್ಲ ಅಲ್ಲೇ ಹೇಳಿಕೊ. ಚಂದ್ರಾವಳೀನ ಅಚ್ಚುಮಾ ಡುತೀ ಪುಸ್ತಕ ಕಳಿಸಿಬಿಡುತೀ ಎಂತ ಆಕೆ ಕಾದಿದಾಳೆ ಅಲ್ಲಿ. ನನಗಂತು ಮನೆಗೆ ಈದಿನ ಬರೀ ಕೈಲಿ ಹೋಗುವ ಧೈರ್ಯವೇ ಇಲ್ಲ.

ಗೋವಿಂದಪ್ಪ:—ಬರುತೇನಪ್ಪ! ತಾಯಿಂದರ ಹೃದಯ ತಂಪಾ ಗಿರುತ್ತೆ. ಅಲ್ಲೇ ಹೇಳಿಕೋತೇನಪ್ಪ. ನಡೀಲಾರೆ ನೋಡಪ್ಪ. ನನ್ನ ಗಡಿಯಾರ ಹೇಗೋ ಹಾಗೇ ನಾನೂ ಕೂಡ—ನಿಂತಲ್ಲೇ ನಡಿಯೋ ಸ್ವಭಾವ ನನ್ನದು.

ಗಿರಿಯಪ್ಪ:—ಆಗಲೋ ಹಾಗೇ ಆಗಲಿ, ಫೋನುಬಳಿ ಹೋಗಿ

ಮಾತಾಡಿಸೋಣ. ಮನೆಯಲ್ಲಿ ಏನಾಗಿ ಹೋಗಿದೆಯೋ ಕಾಣೆ.

ಗೋವಿಂದ:—ಮಕ್ಕಳ ತಾಯಂದಿರು ಮನೆ ಮನೆಯಲ್ಲೂ ಇರೋ ವರೆಗೂ ಪರವಾಯಿಲ್ಲಾಪ್ಪ ಏನೇನೂ ಬೆದರಬೇಡ ಅವರಲ್ಲಿ ಭಕ್ತಿ ಇಟ್ಟು ಅವರನ್ನೇ ನಂಬಿದರೆ ಇಹದಲ್ಲೇ ಸ್ವರ್ಗ.

ಗಿರಿಯಪ್ಪ:—ಫೋನು ಮುಟ್ಟಿ ಕರೀಬೇಕಾದರೇ, ಬೆದರಿಕೆಯಾಗುತ್ತಲ್ಲೋ. ಕೈ ನಡುಗುತ್ತೆ. ಎಂಟು, ನಾಲ್ಕು, ಎರಡು, ಎಂಟು, ಆರು! ಯಾರ್ರೀ, ಸರಿ ಸರಿ ನಮ್ಮ ನೆರೆಮನೆಯವರಲ್ಲವೆ, ಸರೀರಿ ದಯವಿಟ್ಟು ನಮ್ಮ ಮನೆಯವರನ್ನ ಕರೀತೀರಾ! ನಾನು ಇಲ್ಲೇ ಇದ್ದೇನಲ್ಲ........ ನಮ್ಮಾಕೆಯನ್ನ ದಯಮಾಡಿ ಕರೀರಿ, ಕಾದಿರುತೇನ್ರೀ, ಬೇಗ ಬರ ಹೇಳಿ........ಬಂದೆಯಾ, ಕಾವೂ, ಏನು ಮಾಡೋಣೆ? ಈದಿನ ನಿನ್ನ ಊಟದ ಹೊತ್ತಿಗೆ ನಾನು ಬರಲಾರೆ. ನೀವೆಲ್ಲ ಊಟಮಾಡಿ, ನಾನು ಗೋವಿಂದರಾಯರನ್ನ ಕರಕೊಂಡು ಬರುತ್ತೇನೆ........ಎಲ್ಲೆ ಇದ್ದದ್ದು? ಇಷ್ಟು ಹೊತ್ತೂ ಪೇಟೆ ತಿರುಗಿಬಂದು ಇಲ್ಲೇ ಈ ಮುದ್ರಾರಾಕ್ಷಸನ ಕೋಟೆಯಲ್ಲಿ ಸೇರಿಕೊಂಡಿದ್ದೇನೆ. ಚಂದ್ರಾವಳಿ ನನ್ನ ಸಂಗಡ ಬರುವಂತಿಲ್ಲ. ಇನ್ನೂ ಮೇಲು ಹೊದ್ದಿಕೆವರೆಗೆ ಬಂದಿಲ್ಲ. ಅದಿಲ್ಲದೆ ಚಂದ್ರಾವಳಿ ಈಗ ನಿನ್ನ ಬಳಿ ಬರುವಂತಿಲ್ಲ. ಇಲ್ಲಿರುವಾತ ಅಚ್ಚೂಹಾಕೂಲ್ಲ, ಕಚ್ಚೂ ಹಾಕುಲ್ಲ! ಈ ಗೋವಿಂದಣ್ಣ ಕಾಗೆಯೂ ಅಲ್ಲ ಹುಲಿಯೂ ಅಲ್ಲ, ಥೇಟು ನರಿ. ಈಗ ರಿಪೇರಿಗೊಂದು ಗಡಿಯಾರ ತರಲೆ, ಸರಿ. ನಮ್ಮ ಗೋವಿಂದಪ್ಪ ರೇಡಿಯೋ ನೋಡಬೇಕಂತೆ. ಅವನೂ ಬರುತ್ತಾನೆ. ಹೊತ್ತಿಗೆ ಸರಿಯಾಗಿ ಬರಬೇಕೆ? ಟ್ಯಾಕ್ಸಿಮಾಡಿಕೊಂಡು ಬರುವಷ್ಟು ಐಶ್ವರ್ಯ ಎಲ್ಲಿದೆ. ಫೋನುಮಾಡಿದರೆ ಬರುತ್ತೆ, ದಿಟ, ಆದರೆ ಮುಂಗಡ ಹಣ ಬೇಕಲ್ಲ ಅಯ್ಯೋ, ನಿಮ್ಮ! ಎಂದರೆ ನಾನೇನು ಮಾಡಲೆ? ಇಲ್ಲಿ ಯಾರ ಜೇಬಲ್ಲೂ ಹಣವಿಲ್ಲ. ಗೋವಿಂದನೇ ಅವನು ಮುದ್ರಣ ಮಾಡುವುದೆಲ್ಲ ಓದಬಾರದ ಹಾಳೆಗಳೇ, ನೋಟಗಳಲ್ಲ. ಅವನಿಗೂ ಪರದಾಟ ಪಾಪ. ಏನು ನನ್ನ ಅಂಗಿಯಲ್ಲೆ! ನಾನು ಹಳೇ ಅಂಗಿ ಹಾಕಿಕೊಂಡು ಬಂದಿದೇನೆ. ಇದರಲ್ಲೇ ಇದೆಯೆ? ಸರಿ ಎಲ್ಲಿ ಒಳಗಡೆ ಜೇಬಲ್ಲೆ? ಅದನ್ನ ಹೊಲಿದೇ ಬಿಟ್ಟಿದ್ದೀಯಲ್ಲ ರೇಶ್ಮೆದಾರದಲ್ಲಿ! ದಾರ ಕೀಳಲೆ, ಹೂ, ಎಳೆದೆ ಒಳಗಿದೆ ಒಂದು

ನೋಟು ಹತ್ತುರೂಪಾಯಿ ನೋಟು ! ಯಾವಾಗ ಇಟ್ಟಿದ್ದೆನೆ ಇಲ್ಲಿ ನಾನು ? ನಾನಲ್ಲವೆ ? ತಪ್ಪಾಯ್ತು ನೀನೋ, ಆಗಲಿ ! ಸಾಹುಕಾರ್ರ ಹೆಂಡರ ಗಡಿಯಾರ ರಿಪೇರಿಮಾಡಿದ್ದಕ್ಕೆ ಬಂತೇ ? ಬಿಡು ಈ ಸಮಯಕ್ಕೆ ಸಿಕ್ಕಿತಲ್ಲ. ಗಮಘಮವಾಸನೆ ಘೋಸಲ್ಲೂ ಬರುತ್ತಲ್ಲೆ ? ನಿನ್ನ ಧನಿಯಲ್ಲೇ ಆವಾಸನೆ ಇದೆಯೋ ಏನೊ ಯಾವುದಾದರೂ ವಾಹನದಲ್ಲಿ ಇಕ್ಕೊ ಬರುತ್ತೇವೆ. ಇದೋ ಹೊರಟೆ ಜೈ ಪತಿಪಾವನೀ ಕಾವೇರೀ !............ಗೋಂದು, ಏ ಗೋಂದೂ, ನಿನ್ನ ಗಡಿಯಾರದ ರೀಪೇರೀಗೆ ಏನೇನು ಸಾಮಾನು ಕೊಡಿಸುವೇ ಕೊಡಿಸು. ಆದರ ಸ್ಪ್ರಿಂಗೇ ಕಿತ್ತುಹೋಗಿದೆ. ಅದನ್ನ ಸುತ್ತಿ ಒಳಗಿಡಬೇಕಾದರೆ ಕೇಳು ಬಲ ಉಡುಗುತ್ತೆ ನನ್ನ ಕರುಳೇ ಎದ್ದುಬರುತ್ತೆ. ಇಡೀ ರಾತ್ರಿ ಕೂತು ಸರಿಮಾಡಬೇಕು ನೋಡು. ಅಲ್ಲದೆ ರಿಪೇರಿ ಛಾರ್ಜಿಗೆ ಬಿಲ್ಲು ಬೇರೆ ಒಂದೇ ಬರುತ್ತೆ, ಇಪ್ಪತ್ತು ರೂಪಾಯಿ ಸಿದ್ಧವಾಗಿರಲಿ.

ಗೋವಿಂದಪ್ಪ :—ಆಗಲೋ ಆಗ್ಲಿ ! ನೀನು ಯಾವುದಾದರೂ ಗಾಡಿ ನೋಡು, ನಾನು ಉಳಿದ ವಿಚಾರ ನೋಡುತೇನೆ. ಬೇಗ ಹೋಗೋಣ. ನಿನ್ನ ರೇಡಿಯೋ ಮರಿ ಹಸೇಮೇಲಿದ್ದಾಗಲೇ ಹೋಗೋಣ ! ಅವನಿಗೊಂದು ಉಡುಗರೆ ಕೊಡೋಣಂತೆ.

೨

[ಕಾವೇರಮ್ಮ ಮತ್ತು ಗಿರಿಯಪ್ಪ ಇಬ್ಬರೂ ಇದ್ದಾರೆ ಮನೆಯಲ್ಲಿ. ರೇಡಿಯೋ ಅವರ ಕೂಸು. ಮೇಜಿನ ಮೇಲೆ ಗಡಿಯಾರದ ಸಾಮಾನು. ಒಂದು ಗಡಿಯಾರ ದೊಡ್ಡದು.]

ಕಾವೇರಮ್ಮ:—ಅಲ್ಲಾಂದ್ರೇ ನಿನ್ನೇದಿನ ಅದೇನು ಹಾಗೆ ಮಾಡಿದಿರಿ. ಎಲ್ಲರ ಮುಂದೆ ಮಾನ ಕಳೀಬಾರದು ಎಂತ ಸುಮ್ಮನಿದ್ದೇನ್ನಿ. ಈಗ ಒಳ್ಳೇ ಮಾತಿನಲ್ಲಿ ನನ್ನ ಕಳ್ಳ ಜೇಬಿನ ಸಾಲ ಅದರ ಮೇಲಿನ ಸರಳಬಡ್ಡಿ, ಸುಸ್ತಿಬಡ್ಡಿ ಎಲ್ಲ ಒಟ್ಟಾಗಿ ಒಂದೇ ಗಂಟಲ್ಲಿ ಕೊಡುತೀರೋ ಇಲ್ಲವೋ. ಈ ಕ್ಷಣವೇ ಅದೆಲ್ಲಬೇಕು. ಪುನಹಾ ನಮ್ಮ ಬ್ಯಾಂಕಿಗೆ ಆ ಹಣ ಸೇರಿಸಬೇಕು.

ಗಿರಿಯಪ್ಪ:—ಗಡಿಯಾರ ಹೊತ್ತುಕೊಂಡು, ಗೋವಿಂದಪ್ಪನ್ನ ಕರಕೊಂಡು ನಡುರಾತ್ರಿ ಹೊತ್ತಿಗೆ ನಡುಕೊಂಡೇ ಬರುತ್ತಿದ್ದೆ. ನಿನ್ನ ಕಳ್ಳಜೇಬಿನ ಹಣ ಸಿಗದಿದ್ದರೆ. ಆಗ ನೋಡು ನಿನ್ನ ಮಜ್ಜಿಗೆ ಹುಳಿ, ನಿನ್ನ ಖೀರು, ನಿನ್ನ ಸಬ್ಬಾಭಾತೆಲ್ಲ ತಿನ್ನೋರಿಲ್ಲದೆ ಮೂಲೆಹಿಡಿದು ಗೋಳಾಡುತಿದ್ದುವು. ಇಷ್ಟರ ಮೇಲೆ ನಿನ್ನ ರೇಡಿಯೋ ವರ್ಧಂತಿಗೆ ಕಾತರಿಸಿ ಕರೆಸಿಕೊಂಡೆ. ಅಲ್ಲದೆ, ಮನೆ ಗಂಡಸರನ್ನ ಅತಿಥಿಗಳ ಹಾಗೆ ಕಂಡುಕೊಳ್ಳಬೇಕಂತೆ. ಅದೆಲ್ಲ ತಿಳಿದು ತಿಳಿದೂ ಹೀಗೆ ಪೀಡಿಸ್ತಾ ಇದ್ದೀಯಲ್ಲ!

ಕಾವೇರಮ್ಮ:—ಪಾಪ ಅತಿಥಿಗಳಾಗೇ ಇರಿ. ಅತಿಥಿಗಳನ್ನೆಲ್ಲಾ ಕಳಿಸಿಬಿಟ್ಟಹಾಗೆ ನಿಮ್ಮನ್ನೂ ಆ ರಾತ್ರಿ ಹೊರಗಟ್ಟಿದ್ದರೆ, ಆಗ್ಗ ಗೊತ್ತಾಗುತ್ತಿತ್ತು ನಮ್ಮ ದೇವರ ಸತ್ಯ.

ಗಿರಿಯಪ್ಪ:—ಸಾಕು ಎಳೇ ಹುಡುಗಿ ಹಾಗೆ, ಹೇಳಿದ ಮಾತೇ ಹೇಳುತಿ. ಈ ರಾತ್ರಿಯಾದರೂ ಆ ಗಡಿಯಾರ ಸರಿಮಾಡಬೇಕು. ನಿನ್ನ ಸಹಾಯವೇನಾದರೂ ಉಂಟೇನು ಈ ಕೆಲಸಕ್ಕೆ?

ಕಾವೇರಮ್ಮ:—ಸಹಾಯ ಬೇಕೋ? ನಾನು ರೇಡಿಯೋ ಮಲಗಿಸಿಕೊಂಡು ಮಲಗಿಬಿಡುತ್ತೇನೆ. ಮನೆಯಲ್ಲಿ ಗದ್ದಲವೇ ಆಗದಂತೆ ಕಾದುಕೊಳ್ಳುತ್ತೇನೆ. ನಾನು ಬಂದರೆ ನಿಮ್ಮ ಸಾಮಾನೆಲ್ಲ ಹಾಳಾಗುತ್ತೆ ಆದಕ್ಕೇ ದೂರ ಇದ್ದು ಸಹಾಯಮಾಡೋಣ ಎಂತ ಯೋಚನೆ.

ಗಿರಿಯಪ್ಪ:-ಅಷ್ಟಕ್ಕೆಎಷ್ಟಾಗುತ್ತೊ ಅಷ್ಟೇಛಾರ್ಜು ನಿನಗೆ ನಿನ್ನ ಪಾಲಿಗೆ.

ಕಾವೇರಮ್ಮ:—ಓಹೋಹೋ! ನಿಮ್ಮ ಗಡಿಯಾರ ಕೊಟ ಕೊಟಾಂದು, ಅದರ ರಿಪೇರಿ ಛಾರ್ಜಿನಲ್ಲಿ ನನ್ನ ಪಾಲಿನ ಹಣಬಂದು— ಅಯ್ಯೊ ನೋಡಿಕೊಳ್ಳೋಣ ಬಿಡೀಂದ್ರೆ!

ಗಿರಿಯಪ್ಪ:—ಹಾಗೆನ್ನಬೇಡ ಛಾರ್ಜು ತುಂಬ ಬರುತ್ತೆ! ಇನ್ನು ಮೇಲೆ ಒಂದರ ಮೇಲೆ ಒಂದಲ್ಲ ನೂರೆಂಟು ಗಡಿಯಾರ ತಂದು ಸರಿಮಾಡಿಕೊಟ್ರು ತುಂಬ ಹಣ........

ಕಾವೇರಮ್ಮ:—ತುಂಬಹಣ, ತಂಬಿಗೆ ಅಷ್ಟೊ, ಬಿಂದಿಗೆ ಅಷ್ಟೊ! ಬಂತಲ್ಲ ಗುಮಾಸ್ತೆಗಿರೀಲಿ ಒಂದು ಅರಳೀಕಟ್ಟೆಗೆ ಹಾಕುವಷ್ಟು ಸವರನ್ ಸವರನ್ ಸರಸರವಾಗಿ! ಹಾಗೇನೇ ಇದೂನೂ.

ಗಿರಿಯಪ್ಪ:—ಹಾಗೆಲ್ಲ ಹೇಳಿ ನನ್ನ ರೇಗಿಸಬೇಡ. ಗುಮಾಸ್ತ ಗಿರಿಯೇ ಸಾಕು ಈ ಗಿರಿಯಪ್ಪನಿಗೆ, ನನ್ನ ಗದ್ದುಗೆ ಬಳಿಗೆ ಬಾಯಿಗೆ ಬೀಗ ಹಾಕಿಕೊಂಡು ಬರಬೇಡವೇ ಭಕ್ತಾದಿಗಳು! ಇವತ್ತೊಬ್ಬ ಸಾವು ಕಾರ ಬರುತಾನೆ. ಅವನ್ನ ಹಿಂಡಿದರೆ ಸಾಕು, ಸುರಿದು ಹೋಗುತ್ತೆ ಹೊನ್ನುಹೊಳೆ.

ಕಾವೇರಮ್ಮ:—ನಡುವೆ ಏನಾದರೂ ಕೀಲು ತಪ್ಪಿದರೆ ನಿಲ್ಲಿಸಿ ಬಿಡುತಾರೆ ಕಂಬಿ ಹಿಂದೆ! ಬೇಡ ನನ್ನ ದೊರೆ, ಅಂಥಾದ್ದೆಲ್ಲ ಉಂಡು ತಿಂದು, ಉಟ್ಟು ತೊಟ್ಟು ಕಡೆಗೆ ನಿಮ್ಮನ್ನ ಕಳಕೊಂಡರೆ, ಆಗೇನುಗತಿ. ಹಿಂದಿನಕಾಲವಲ್ಲಾಗಿದ್ದರೆ ಮುಂದಿನ ಜನ್ಮ ಎನ್ನಬಹುದಾಗಿತ್ತು. ಹಾಗಲ್ಲ ಈಗ ಸ್ವರ್ಗ ನರಕ ಅಡಿಗೆಮನೆ ನಡುಮನೆ. ಮಾಡಿದ್ದುಣ್ಣೊ ಮಹಾ ರಾಯ. ಒಂಬತ್ತು ಗಂಟೇಲಿ ಕುದಿಸಿದ್ದನ್ನೇ ಹನ್ನೊಂದು ಗಂಟೇಲಿ ಉಣ ಬೇಕಾದೀತು. ಹಾಗೇನೂ ಅನ್ಯಾಯದ ಹಣ ಹೊಸಲೊಳಗೆ ತರಬೇಡಿ ನನ್ನ ದೇವರೇ. ಕಷ್ಟಪಟ್ಟು ದುಡಿಯೋಣ. ಅದೇ ಗಟ್ಟಿ ವರಹ. ಅದೇ ಸಾಕು.

ಗಿರಿಯಪ್ಪ:—ಹಾಗಾದರೆ ನಿನ್ನ ಸ್ಪ್ರಿಂಗ್ ಬಿಚ್ಚಿಕೊಂಡು ನಾನು ಹೇಳಿದಲ್ಲಿಗೇ ಬಂತಲ್ಲ ಬಿಡು. ಮುಂದಿನ ತಿಂಗಳು ಮುಂದಿನ ಮಳಿಗೆ ಬಿಡಿಸಿಕೊಂಡು ಮಗುವಿನ ಹೆಸರಲ್ಲಿ ಒಂದು ಬೋರ್ಡು ಹಾಕುತೇನೆ.... ಗುಮಾಸ್ತಗಿರೀಗೇ........

ಕಾವೇರಮ್ಮ—ರಾಜೀನಾಮೆಯೋ ಗುಮಾಸ್ತಗಿರೀಗೆ........ಸಧ್ಯಕ್ಕೆ ಹಾಗೆ ಬೇಡ. ಅದೆಲ್ಲ ಸರಿ, ನಿಮ್ಮ ಬೋರ್ಡಿನಲ್ಲಿ ಕಾಲಪುರುಷಂ ಎಂಡ್ ಕೋ........ಎಂತ ಬರೆಸಿಬಿಡಿ........

ಗಿರಿಯಪ್ಪ:....ಡಾಕ್ಟರ್ ಆಫ್ ಟೈಂಸ್ ಅಥವ ಕ್ರೋನೋ ಫಾರ್ಮು ಸೀ-ಎಂತ ಇಡಬಹುದು; ಆದರೆ ನಮ್ಮ ದೇಶದವರು ಅಷ್ಟು ಮುಂದುವರಿ ದಿಲ್ಲ! ಇರಲಿ ಏನೋ ಇಡೋಣ. ಆಗ ಮನೆಮನೆಯಿಂದ ದುರಸ್ತಾಗ ಬೇಕಾದ ಗಡಿಯಾರಗಳೆಲ್ಲ ಸಾಲಿಟ್ಟು ಬರಬೇಡವೆ........

ಕಾವೇರಮ್ಮ:—ಸರಿ ಸರೀ, ಆಗ ಊರೆಲ್ಲರ ಗಡಿಯಾರದ ಕಳ್ಳು ಬಳ್ಳಿಗಳೂ ಹೊತ್ತು, ಕಾತು, ಹಣ್ಣಾಗಿ, ನಿಮ್ಮ ಕಂಪೆನಿ ಗೋಡೆಮೇಲೆ

ನೋಡುನೋಡೆಲೆ ಮುಂಗಡೆ ನೇತಾಡುತಿರ್ಪವು ನೋಡೆಲೆ....ಎಂತ ಇರುತ್ತವೆ. ಆ ಗಡಿಯಾರದ ಸ್ಪ್ರಿಂಗುಗಳೆಲ್ಲ ಕೈಗೆ ಕಾಲಿಗೆ ಸುತ್ತಿಗೊಂಡು....

ಗಿರಿಯಪ್ಪ.—ಆಹಾಹಾ, ನೋಡಿದೆಯಾ, ನಿನ್ನೊಂದೊಂದು ಮಾತೂ, ಒಂದೊಂದು ಹೊನ್ನ ಕಣೆ ಕಾವೇರಿ! ಆ ಹಳೇ ಅಂಗಿ ಜೇಬಲ್ಲಿ ನೋಟು ಬಚ್ಚಿಟ್ಟುಕೊಂಡಿತ್ತು ನೋಡು, ಹಾಗೇ ಈ ನಿನ್ನ ಮಾತಿನಲ್ಲೂ....

ಕಾವೇರಮ್ಮ:—ನಾನು ಮೋಸಹೋಗಿ ನದಿಯಾಗಿ ಹಾರಿ ಬಿದ್ದಲ್ಲಿ, ನಿಮಗೆ ಮಿಂಚಿನ ಶಕ್ತಿ ಅಲ್ಲವೆ. ಅದೇನು ಹೊಳೀತು ಈಗ ಹೇಳಿನೋಡೋಣ.

ಗಿರಿಯಪ್ಪ:—ಸ್ಪ್ರಿಂಗಿನ ವಿಚಾರವೆ! ಭಾರಿ ಯೋಚನೆ ಅದು. ನಿನಗೆ ಹಿಡಿಸುಹಾಗಿಲ್ಲ.

ಕಾವೇರಮ್ಮ:—ಹಿಡಿಸದೆ ಏನು. ನಾನು ಕೂಡ ಸರಿಮಾಡಿದ್ದೇನೆ ಗಡಿಯಾರ. ಸ್ಪ್ರಿಂಗ್ ಸುತ್ತಿದ್ದೇನೆ. ಬಿಚ್ಚಿದ ಗಡಿಯಾರ ಜೋಡಿಸಿದ್ದೇನೆ. ನಮ್ಮ ತಂದೆಯವರ ಆಸ್ತಿಯೆಲ್ಲ ಗಡಿಯಾರದಲ್ಲೇ ದುಡಿದದ್ದಲ್ಲವೆ? ಆದರೆ ಅವರ ಹತ್ತಿರ ಆಯುಧಸಾಮಗ್ರಿ ಸಾಮಾನೆಲ್ಲ ತುಂಬ ಇತ್ತು. ನೀವೋ ಬರೀ ಕೈಲಿ........

ಗಿರಿಯಪ್ಪ:—ಬರೀ ಕೈಲೇ ಮೊಳ ಹಾಕಬೇಕು ಒಂದೆರಡುದಿನ. ಅನಂತರ ಸರಿಹೋಗುತ್ತೆ. ಅದಲ್ಲದೆ ಜೊತೆಗೆ ನೀನಿದ್ದೀ ಎಂತ ಧೈರ್ಯದ ಮೇಲೆ, ನಾನೂ ಕೂಡ ಹತ್ತಾರು ಗಡಿಯಾರ ಬಿಚ್ಚಿಟ್ಟು ಹಾಳುಮಾಡಿದ್ದೇನಲ್ಲ ಆಗಲೆ. ಅಮೆರಿಕದಲ್ಲಿ ಒಬ್ಬನ ಹತ್ತಿರ ತುಂಬ ಗಡಿಯಾರಗಳು ಇವೆಯಂತೆ. ಅವಕ್ಕೆಲ್ಲ ಹಾಗೆ ಹೀಗೆ ಕೀಲು ಕೊಡುತ್ತಾಹೋದರೆ ಎರಡು ದಿನ ಹಿಡಿಯುತ್ತಂತೆ. ಹಿಂದಿನ ಚಕ್ರವರ್ತಿಗಳ ಹತ್ತಿರ........

ಕಾವೇರಮ್ಮ:—ಅದೆಲ್ಲ ಇರಲಿ. ನಿಮ್ಮ ಹೊಸ ಯೋಚನೆ ಏನದು?

ಗಿರಿಯಪ್ಪ:—ಹೊಸ ವಿಚಾರವೆ? ಕೇಳು ಹಾಗಾದರೆ—ನನಗೆ ತುಂಬ ಹಣ ಸಿಕ್ಕಿದಾಗ ತುಂಬ ಉಕ್ಕಿನ ತಗಡೆಲ್ಲ ಖರೀದಿಮಾಡಿ, ಸ್ಪ್ರಿಂಗ್ ಪಟ್ಟಿಯಾಗಿ ಕತ್ತರಿಸಿ, ಚಕ್ರಗಳಿಗೆಲ್ಲ ಸುತ್ತಿ ಸುತ್ತಿ........

ಕಾವೇರಮ್ಮ:—ನಮ್ಮ ರೇಡಿಯೋ ಕೈಕಾಲಿಗೆಲ್ಲ ಸುತ್ತಿ ಸುತ್ತಿ, ನನಗೆ ಸಾಕಾದಷ್ಟು ಸುಸ್ತುಮಾಡಿ........ಏನು ಹಾಗಾದರೆ........ಇದೂ ಒಂದು

ತಾತನ ಕಂಪೆನಿಯೇ ಆಗಿಬಿಡುತ್ತೆ. ಬಿಡೀಂದ್ರೆ, ಗಗನಕ್ಕೆ ಹಾರಬೇಡಿ. ಈಗಿರೋ ಕೋಲು ಕರಟ ಚಾಪೆನೇ ಸಾಕಾಗಿದೆ.

ಗಿರಿಯಪ್ಪ :—ಆಗಲೂ ಹೀಗೇ ಇರುತ್ತೇನೆಯೆನೇ ಕಾವೇರಿ? ಆಗ ಅರಮನೆಯಂಥ ಪ್ರಾಸಾದವನ್ನು ಕಟ್ಟಿಸಿ, ನಮ್ಮ ಘಟಿಕಾ ಯಂತ್ರಕ್ಕೊಂದು ಅಂತಸ್ತನ್ನು ಕಟ್ಟಿಸಿ, ಅಲ್ಲಿ ಚಿಮ್ಮುವ ಸ್ಪ್ರಿಂಗುಗಳಿಗಾಗಿ ಒಂದು ನೆಲೆಯನ್ನೇ ಮಾಡಿಸುತ್ತೇನೆ. ಆ ಚಿಮ್ಮುವ ಸ್ಪ್ರಿಂಗುಗಳೆಲ್ಲ ನನ್ನ ಹೊಸ ನಿರ್ಮಾಣದ ಮಹಾ ಮೂಲ ಯಂತ್ರದಲ್ಲಿ ಚಕ್ರ ಚಿಮ್ಮಿಗಳಾಗಿ........ ಇತ್ಯಾದಿ ನಮ್ಮ ಆಗಿನ ವೈಭವ........

ಕಾವೇರಮ್ಮ :—ಅದೇನೋ ಅರ್ಥವೇ ಆಗುವುದಿಲ್ಲ. ಬಾಪೂಜೀಯವರ ಸತ್ಯಾಗ್ರಹದ ಮರ್ಮವನ್ನಾದರೂ ಅರ್ಥಮಾಡಿಕೊಂಡೇನು, ಆದರೆ ನಿಮ್ಮ ಚಿಮ್ಮಿಯ ಮರ್ಮ ಉಕ್ಕಿನ ಕಡಲೆಯಾಗಿಬಿಟ್ಟಿದೆ. ನಿಮ್ಮ ಧರ್ಮಕ್ಕೆ ಸಧ್ಯಸಾಕು ಸುಮ್ಮನಿರಿ. ಕೂಸಿಗೆ ರೇಡಿಯೋ ಎಂತ ಹೆಸರಿಟ್ಟಿರಿ........ ಅದರ ಕಿರುಚಾಟ ಕೇಳಲಾರೆ. ಇನ್ನು ನಿಮ್ಮ ವಿಶ್ವಾಮಿತ್ರ ಸೃಷ್ಟಿಯಾದ, ಆ ಚಿಮ್ಮಿ ಚಕ್ರಗಳೋ, ಸ್ಪ್ರಿಂಗ್ ಚಕ್ರಗಳೋ, ಅದೇನೋ ನನಗೆ ಭಯವಾಗುತ್ತೆ ಊಹಿಸಿಕೊಂಡರೆ.

ಗಿರಿಯಪ್ಪ :—ಕಾವೇರಿಯ ಕೂಸು ರೇಡಿಯೋ, ಗಿರಿಯಪ್ಪನ ಕೂಸು ಹೊಸ ಸ್ಪ್ರಿಂಗ್ ಯೋಜನೆಯ ಚಕ್ರ ಚಿಮ್ಮಿ. ನಿನ್ನ ಕೂಗು ಮನೆ ಉದ್ಧಾರಕ್ಕೆ, ನನ್ನ ಕೂಸು ದೇಶೋದ್ಧಾರಕ್ಕೆ. ನಾನು ಈಗ ಉಕ್ಕಿನ ಚಕ್ರ ಚಿಮ್ಮಿಗಳ ವಿಚಾರವನ್ನೇ ಹೇಳುತ್ತೇನೆ ಕೇಳು. ಪೂಜ್ಯ ಬಾಪೂಜೀ ಇದ್ದಾರಲ್ಲ ಅವರೇ ಭಾರತದ ಹಿರಿಯ ಸ್ಪ್ರಿಂಗ್. ದೇವರು. ಅವರನ್ನು, ಒಂದು ಸಜೀವ ಚಕ್ರ ಚಿಮ್ಮಿಯನ್ನಮಾಡಿ, ನಮ್ಮ ದೇಶಕ್ಕೆ ಕಳಿಸಿದ್ದಾನೆ. ಇಂಡಿಯಾ ದೇಶದ ಸಣ್ಣ ದೊಡ್ಡ ಚಕ್ರಗಳೆಲ್ಲ, ಅವರ ಚಿಮ್ಮುವ ಶಕ್ತಿಯಿಂದ ತಿರುಗುತ್ತೇವೆ. ಹಾಗಿರುವುದರಿಂದಲೇ, ಭಾರತದ ಮೊರೆಯ ಮೇಲೆ ಜಗತ್ ಸಂಸ್ಕೃತಿಯ ಗಂಟೆ........

ಕಾವೇರಮ್ಮ :—ಎಲ್ಲಿಂದೆಲ್ಲೀಗೆ........ ಅಯ್ಯೋ ಸಾಕು ಬಿಡೀಂದ್ರೆ ಉಪನ್ಯಾಸ.

ಗಿರಿಯಪ್ಪ :—ಶ್ರೀಮಾನ್ ಅಧ್ಯಕ್ಷರೆ, ಎರಡೇ ನಿಮಿಷ ಅವಕಾಶ

ಕೊಟ್ಟರೆ ಸಾಕು, ನನ್ನ ಉದ್ಯಮವನ್ನು ವಿವರಿಸಿ ಈ ಸ್ಪ್ರಿಂಗುಪನ್ಯಾಸ ವನ್ನು ಮುಗಿಸಿಬಿಡುತ್ತೇನೆ.

ಕಾವೇರಮ್ಮ:—ಅಧ್ಯಕ್ಷರಂತೆ ಅಧ್ಯಕ್ಷರು! ಮುಗಿಸಿಬಿಡಿ, ಸಾರಿಗೆ ಒಗ್ಗರಣೆ ಹಾಕಿ ಆಯಿತು. ನಮ್ಮ ರೇಡಿಯೋ ರಾಜ ಹಾಲು ಕುಡಿದು ಮುಗಿಸುವಷ್ಟೇ ಕಾಲ ಇನ್ನುಳಿದಿದೆ ನಿಮ್ಮ ಚಿಮ್ಮಿ ಭಾಷಣಕ್ಕೆ.

ಗಿರಿಯಪ್ಪ:—ಈ ನಮ್ಮ ಮಾತೆ ಭಾರತದಲ್ಲಿರುವ ನರನಾರಿಯರೆಲ್ಲ ವರುಷದಲ್ಲಿ ಒಂಬತ್ತು ತಿಂಗಳೇ ಕೆಲಸವಿಲ್ಲದೆ ಇರುತ್ತಾರೆ. ಅವರೆಲ್ಲರಿಗೆ ನನ್ನಿಂದ ಸುಲಭ ಸಂಪಾದನೆಯಾಗುತ್ತದೆ, ನಮ್ಮ ಚಿಮ್ಮಿ ಕಂಪನಿಯ ಚಕ್ರ ಚಿಮ್ಮಿಗಳನ್ನು ತಲೆಗೆ ಹತ್ತೂಹತ್ತರಂತೆ ಪ್ರತಿ ಸಂಸಾರಕ್ಕೂ ಹಂಚಿ ಬಿಡುತ್ತೇವೆ. ಮನೆಯ ಮಕ್ಕಳು ಮುದುಕರೆಲ್ಲ ಕೂತಾಗ ನಿಂತಾಗ ಅವು ಗಳನ್ನು ದಿನವೂ ಸುತ್ತಿಕೊಟ್ಟು ಬಿಡುತ್ತಾರೆ. ಹಾಗೆ ಸುತ್ತಿಕೊಟ್ಟ ಸ್ಪ್ರಿಂಗ್ ಚಕ್ರಗಳನ್ನು ನಮ್ಮ ಕೇಂದ್ರ ಕಾರ್ಖಾನೆಯಲ್ಲಿರುವ ಮೂಲ ಯಂತ್ರಕ್ಕೆ ಜೋಡಿಸಿಬಿಟ್ಟರೆ ಅಲ್ಲಿ ಅವು ಶಕ್ತಿ ಬೀಜಗಳಾಗುತ್ತವೆ. ಆ ನಮ್ಮ ಕಾರ್ಖಾನೆಗೆ ಇನ್ನಾವ ಜಲ, ತೈಲ, ವಿದ್ಯುತ್ ಶಕ್ತಿಗಳೂ ಬೇಕಿಲ್ಲ. ಅಲ್ಲಿರುವ ಚಕ್ರಗಳೆಲ್ಲ ಕೇವಲ ಮಾನವರ ನರಬಲ ಸ್ನಾಯು ಬಲಗಳಿಂದಲೇ ಶಕ್ತಿಪಡೆದು ಮಹತ್ತಾದ........

ಕಾವೇರಮ್ಮ:—ಇದೇಕೋ ರಬ್ಬರ್ ಭಾಷಣವಾಗುವಂತಿದೆ. ಎಳೆ ದಷ್ಟೂ ಬರುತ್ತಾ ಇದೆ.

ಗಿರಿಯಪ್ಪ:—ಮಹತ್ತಾದ, ಆಶ್ಚರ್ಯಕರವಾದ, ತೀವ್ರ ವಿದ್ಯುತ್ ಶಕ್ತಿಯನ್ನು ನಮ್ಮ ನಾಡಿನ ಸಲುವಾಗಿ ಉತ್ಪತ್ತಿಮಾಡುತ್ತವೆ. ಕೆಲಸವಿಲ್ಲ ದವರಿಗೆ ಕೆಲಸ, ಪದಾರ್ಥಗಳಿಲ್ಲದವರಿಗೆ ಪದಾರ್ಥ, ಹಣವಿಲ್ಲದವರಿಗೆ ಹಣ, ಅನ್ನವೇ ಇಲ್ಲದವರಿಗೆ ಅನ್ನ........

ಕಾವೇರಮ್ಮ:—ಸಾಕೂಂದ್ರೇ, ಅನ್ನ ಕಾಯಿಸಬಾರದು ಏಳಿ.

ಗಿರಿಯಪ್ಪ:—ಅಲ್ಲವೇ, ನಾನು ಹೇಳುವುದನ್ನು ಕೇಳಿಯಾದರೂ ಕೇಳು, ಭಾರತೀಯ ಕಾರ್ಮಿಕರಿಗೂ, ಪಾಶ್ಚಾತ್ಯ ಕೂಲಿಕಾರರಿಗೂ, ವ್ಯತ್ಯಾಸವಿನ್ನೇನೂ ಇಲ್ಲ. ಅವರೆಷ್ಟು ಅಶ್ವಶಕ್ತಿಯನ್ನು ಕೊಡಬಲ್ಲರೋ, ಅಷ್ಟೇ ಅಶ್ವಶಕ್ತಿಯನ್ನು ಇವರೂ ಹೂಡಿಕೊಡಬಲ್ಲರು, ಆದರೆ ಭಾರತೀಯ

ರಿಗೆ ಸಾಧನ ಸಾಮಗ್ರಿ ಕಡಿಮೆ. ನನ್ನ ಸ್ಪ್ರಿಂಗ್ ಸಾಧನಗಳಾದ ಚಕ್ರ ಚಿಮ್ಮಿಗಳು ಅಂಥ ಅನಾನುಕೂಲಗಳನ್ನು ಸಾಕಾದಷ್ಟು ಕಡಿಮೆಮಾಡ ಬಲ್ಲವು. ಚರಕದಲ್ಲಿ ನೂರ ನೂತರೆ ಅದೆಷ್ಟು ಲಾಭವೋ, ಅದಕ್ಕೂ ಮಿಗಿ ಲಾದ ಸಂಪಾದನೆಯುಂಟು ನನ್ನ ಚಕ್ರ ಚಿಮ್ಮಿಗಳಿಂದ. ಒಂದುವೇಳೆ ಇಡೀ ಭಾರತದಲ್ಲಿರುವ ಜಲಪಾತಗಳೆಲ್ಲ ನಿಂತರೂ ಚಿಂತೆಯಿಲ್ಲ. ನಮಗೆ ಬೇಕಾದಷ್ಟು ಮಿಂಚಿನಶಕ್ತಿಯನ್ನೆಲ್ಲ ಭಾರತೀಯರು ವಿರಾಮಕಾಲದಲ್ಲಿ ತಮ್ಮ ಉಸಿರು ಬಲದಿಂದಲೇ ಉತ್ಪತ್ತಿಮಾಡಬಹುದು. ರೈಲು, ರೇಡಿಯೋ, ಗಿರಣಿ, ಸಿನಿಮ ಮುಂತಾದವುಗಳೆಲ್ಲಕ್ಕೂ ನಮ್ಮ ಕೇಂದ್ರ ಯಂತ್ರ ಮಹಲಿ ನಿಂದ ಶಕ್ತಿಯನ್ನು ಒದಗಿಸಬಹುದು. ದೇವರ ಚಿತ್ತಕ್ಕೆ ಬಂದರೆ ನನ್ನ ಚಕ್ರ ಚಿಮ್ಮಿಗಳಿಂದಲೇ ದೇಶೋದ್ಧಾರ ಮತ್ತೆ ಇತರ ದೇಶಗಳೆಲ್ಲ ಹಿಂದಿ ನಂತೆ ಭಾರತೀಯರ ಶಿಷ್ಯರಾಗುವುದಕ್ಕೆ ಒಪ್ಪಿದರೆ ಅವರಿಗೂ ಉದ್ಧಾರ. ನೋಡಿದೆಯಾ, ಚಿಮ್ಮಿ ಚಕ್ರಗಳಿಂದ ಹೇಗೆ ಜಗದೋದ್ಧಾರವಾಗುತ್ತದೆ!

ಕಾವೇರಮ್ಮ:—ಅಯ್ಯೋ, ಜಗದೋದ್ಧಾರಾ! ನನ್ನ ಗೋಳು ಹುಯ್ಯಬೇಡಿ ಏಳೀಂದ್ರೆ! ತುಂಬಾ ಕೆಲಸ ಇದೆ. ಆ ಗಡಿಯಾರ ಬೇರೆ ನನ್ನ ನಿದ್ದೆಗೆ ಉರುಳಾಗಿ ಬಂದು ಕೂತುಬಿಟ್ಟಿದೆ. ಬೇಗ ಬೇಗ ಏಳ ಬಾರದೆ.

ಗಿರಿಯಪ್ಪ:—ನೋಡು ಕಾವೇರಿ ಇನ್ನೊಂದು ವಿಚಾರ. ಈ ಉಪ ನ್ಯಾಸವನ್ನೆಲ್ಲ ಬರೆದು ಬಾಪೂಜೀಯವರಿಗೆ ಕಳಿಸಿಬಿಟ್ಟರೆ ಹೇಗಿರುತ್ತೆ? ಏನು ನಿನ್ನ ಅಭಿಪ್ರಾಯ........

ಕಾವೇರಮ್ಮ:—ನಿತ್ಯ ನಿತ್ಯ ನೋಡು ಕಾವೇರಿಯ ಆಗುತ್ತಾನೆ ಇದೆಯಲ್ಲ ನನ್ನೇನು ಕೇಳುತ್ತೀರಾ! ನಿಮ್ಮ ನರಿಗೊಂದಪ್ಪ ಇದಾನಲ್ಲ, ಅವನ ಕೈಲಿ ಕೊಟ್ಟು ಅಚ್ಚುಹಾಕಿಸಿ ಎಲ್ಲರಿಗೂ ಹಂಚಿಬಿಡಿ. ಈಗಲೋ ನಿಮ್ಮ ಭಾರಮಾತೆಯ ಸುಪುತ್ರರೆಲ್ಲ ಪರದಾಡುತ ಇದಾರೆ ಪೋಸ್ಟ್‌ವಾರ್ ಸ್ಕೀಂ ಎಂತ—ನಿಮ್ಮದೂ ಒಂದು ಯುದ್ಧಾನಂತರ ಯೋಜನೆ ಎಂತ ಪಠ ಕಟ್ಟಿ ಹಾರಿಸಿಬಿಡಿ. ನಿಮ್ಮ ಕತೇನೆ ಮೊದಲು ಅಚ್ಚಿಸಿ ಹೆಚ್ಚಿಸಿ ಹಂಚಿಸಿ ಬಿಡಿ ಅದಾದರೂ ಮೆಚ್ಚಾಗಲಿ........

ಗಿರಿಯಪ್ಪ:—ಹಾಗಾದರೆ ನಿಜವಾಗಿಯೂ ಹೇಳೆ ನಿನ್ನ ಚಂದ್ರಾ

ವಳೀ ನಿಧಾನವಾದರೂ ಪರವಾಯಿಲ್ಲವೇನೆ ? ನನ್ನ ಚಿಮ್ಮಿ ಚರಿತ್ರೆ ಮೊದಲೇ ಮುದ್ರಣ ಮಾಡಿಸಿಬಿಡೋಣವೇನೆ ?

ಕಾವೇರಮ್ಮ:—ನಿಮ್ಮ ಮಾತಿ ಸ್ಪ್ರಿಂಗ್ ಸಧ್ಯ ಮೊದಲು ಸುತ್ತಿಡಿ. ಊಟಕ್ಕೇಳಿ ತುಂಬಾ ಕೆಲಸವಿದೆ. ನಾಳೆ ಗುರುವಾರ ಶ್ರೀ ಸಾಯಿಬಾಬನಿಗೆ ಹರಿಕೆ ಹಾಕಿಕೊಂಡಿವೇನೆ—ಪೂಜೆ, ಪುರಸ್ಕಾರ, ಮಾಸಲು, ಉಪವಾಸ, ಎಂತ ಏನೇನೆಲ್ಲ ಇದೆ.

ಗಿರಿಯಪ್ಪ :—ಇನ್ನೇನೇನೆಲ್ಲ ಇವೆ.

ಕಾವೇರಮ್ಮ:—ಮುಖ್ಯ ಪ್ರಾರ್ಥನೆ ಒಂದಿದೆ—ಸಾಯಿಬಾಬನ ಹತ್ತಿರ.

ಗಿರಿಯಪ್ಪ :—ಅದೇನು ಅಂಥಾ ಪ್ರಾರ್ಥನೆ ?

ಕಾವೇರಮ್ಮ:—ಅಪ್ಪಾ ಸಾಯಿಬಾಬ, ನಮ್ಮನೆ ದೊಡ್ಡ ಸ್ಪ್ರಿಂಗೇ ಬಿಚ್ಚಿಹೋಗಿದೆ, ಅದನ್ನ ಸುತ್ತಿಕೊಡು ತಂದೆ........

ಗಿರಿಯಪ್ಪ :—ಸುತ್ತಿಕೊಡು ತಂದೆಯಂತೆ—ಇಷ್ಟು ಹೊತ್ತೂ ಮಾತಾಡಿದ್ದಕ್ಕೋ ? ಏನು ಘಾಟೀನೇ ನೀನು ! ನನಗೆ ಅರ್ಥವಾಯಿತು. ನಾನೋ ದೊಡ್ಡ ಸ್ಪ್ರಿಂಗು ?

ಕಾವೇರಮ್ಮ :—ಅವನಿಗೆ ಅರ್ಥವಾಗುತ್ತೆ........

೩

[ಪೂಜೆಗೆ ಏರ್ಪಾಡಾಗಿದೆ, ಸಾಯಿಬಾಬನ ಚಿತ್ರಕ್ಕೆ ಅಲಂಕಾರವಾಗಿದೆ. ಕಾವೇರಮ್ಮ ಒಳಗಿದ್ದಾಳೆ, ಗಿರಿಯಪ್ಪ ಹೊರಗಿನಿಂದ]

ಗಿರಿಯಪ್ಪ :—ಏನ್ರೀ ಏನುಮಾಡುತಾ ಇದ್ದೀರಿ ಕಾವೇರಿಗಳೆ ?

ಕಾವೇರಮ್ಮ:—ಯಾರ್ರೀ ಕರೆದವರು ? ಬನ್ನಿ ಅರಸಿನ ಕುಂಕುಮ ಸ್ವೀಕರಿಸಿ. ಪೂಜೆಗೆ ಅಣಿಯಾಗಿದೆ. ಮಂಗಳಾರತಿ ಬಾಕಿ........ಬೇಗ ಹೋಗುವಿರಂತೆ ಬನ್ನಿ !

ಗಿರಿಯಪ್ಪ :—ಯಾರೂಂತೀ ಕರೆದವರು ? ನಾನು ಕಣೆ !

ಕಾವೇರಮ್ಮ :—ಅಯ್ಯೋ ನಿಮ್ಮ ಹುಡುಗಾಟವೇ ! ಹೀಗೆ ಬಂದು ಒಂದೆರಡು ಹೂವೇರಿಸಿ. ಒಳ್ಳೆ ಬುದ್ಧಿಕೊಡುತ್ತಾನೆ ಸಾಯಿನಾಥ.

ಗಿರಿಯಪ್ಪ :—ಆಫೀಸು ದೇವರ ನೇವೇದ್ಯಕ್ಕೆ ತಂಗಳ ಕಾಗದಗಳನ್ನೆಲ್ಲ ಜೋಡಿಸಿ ಒಗ್ಗರಣೆ ಹಾಕುತಾ ಇದ್ದೇನೆ. ಇವೆಲ್ಲ ಬೇಗ ಮುಗಿದರೆ ಮುಂದೆ ಗೋಂದಪ್ಪನ ಗಡಿಯಾರದ ರಿಪೇರಿಗೆ ಪುರಸತ್ತು ! ಅದಕ್ಕೇ ಇಲ್ಲೇ ಕೂತೆ. ನೀನು ಹಾಡ ಹೇಳು, ಪೂಜೆಮಾಡು, ಮಂಗಳಾರತಿ ವೇಳೆಗೆ ಕರೆದುಬಿಡು.

ಕಾವೇರಮ್ಮ:— ಬಾರೋ ಬಾಬಾರೋ ದಯೆತೋರೋ ||
ತಾಯ್ ತಂದೆಯು ನೀನ್
ಕಾಯ್ವಾತನೆ ನೀನ್
ಸಾಯ್‌ನಾಥನೆ ನೀನ್
ಬಾರೋ ಬಾಬಾರೋ ದಯೆತೋರೋ ||

ಇದೇನೊಂದ್ರೇ ಹೀಗೆ ಹಿಂದುಗಡೆಯಿಂದ ಬಂದು ಕಣ್ಣು ಮುಚ್ಚೋದು. ದೇವರ ಪೂಜೆಮಾಡುವಾಗ ಗಂಭೀರವಾಗಿ ದೂರ ನಿಂತಿರಿ. ಮನೆಯಲ್ಲಿ ಹೇಳೋರು ಕೇಳೋರು ಇಲ್ಲಾಂತ ತಿಳ್ಕೊಂಡಿರಾ ಹೇಗೆ?

ರೇಡಿಯೋ:—ದೆದ್ದೆದ್ದೇ, ಗಿಗ್ಗಿ, ಪೆಪ್ಪೆ, ಊ ಊ!

ಕಾವೇರಮ್ಮ:— ಬಾರೋ ಬಾಬಾರೋ ದಯೆತೋರೋ ||
ತಾಯ್ ತಂದೆಯು ನೀನ್
ಕಾಯ್ವಾತನೆ ನೀನ್
ಸಾಯ್‌ನಾಥನೆ ನೀನ್
ಬಾರೋ ಬಾಬಾರೋ ದಯೆತೋರೋ ||

ಗಿರಿಯಪ್ಪ :—ಬಂದನಲ್ಲ ಸಾಯ್‌ನಾಥ, ನಿನ್ನ ಕಾಯುವುದಕ್ಕೆ, ಬಾರೋ ಬಾಬಾರೋ ಸಾಯ್‌ನಾಥನೆ ನೀನ್........

ಕಾವೇರಮ್ಮ:—ಹೌದೇ ಹೌದು, ಅವನೇ ಸಾಯ್‌ನಾಥ, ನನ್ನ ಕಾಪಾಡುವ ದೊರೆಯೇ ಅವನು. ಬಾರೋ ಬಾಬಾರೋ........

ರೇಡಿಯೋ:—ದೆದ್ದೆದ್ದೆ! ಗಿಗ್ಗಿ! ಪೆಪ್ಪೆ! ಊ ಊ ಊ!

ಕಾವೇರಮ್ಮ:—ಎದ್ದೆಯಾ ತಂದೆ, ನನ್ನ ಕಂದಕಣೇ, ಹುಗ್ಗೀ, ಪೆಪ್ಪೆಂಟು ಅಪ್ಪಚ್ಚೀ, ಉಂಡೇ—ಎಲ್ಲ ಮಾಡಿ ನನ್ನ ಸಾಯ್‌ನಾಥನಿಗೆ ನಾಳೆ ಬೆಳಗ್ಗೆ ನೇವೇದ್ಯಮಾಡೋಣೇನು? ಬಾಪ್ಪಾ!

ಗಿರಿಯಪ್ಪ :—ನಾನೇ ಮಗುವಾಗಿದ್ದರೆ, ಅಷ್ಟು ಉಪಚಾರ ವಾದರೂ .......

ಕಾವೇರಮ್ಮ:—ಇದಾರು ಮತ್ತೆ, ನಿಮ್ಮ ಬಯಕೆಯೋ ! ನಿಮ ಗೇನೂಂತ ಕಡಿಮೆಯಾಗಿರೋದು ? ಇನ್ನು ಮೇಲೆಲ್ಲ ಈ ಸಾಯ್‌ನಾಥನಿಗೇ ಮುತ್ತೂ ಇವನಿಗೆ, ಮುದ್ದೂ ಇವನಿಗೇ........ನಿಮ್ಮನ್ನಾರು ಮಾತಾಡಿ ಸೋರು ! ಅಲ್ಲವೇನೋ ರೇಡಿಯೊ........

ಗಿರಿಯಪ್ಪ :—ಏನೋ, ಹೋಗಲಿಬಿಡು, ನನ್ನ ಕೆಲಸಕ್ಕೆ ನಾನು ಹೋಗಿ ಕುಕ್ಕರಿಸಿಕೋತೆನೇ !

ಕಾವೇರಮ್ಮ:—ನಿಮಗೆ ಏನು ಕಡಿಮೆಯಾಗಿರೋದು. ಈಗ ತಿಂದಿರೋದರ ಜತೆಗೆ ಒಂದಿಷ್ಟು ಪ್ರಸಾದವನ್ನು ತಿಂದುಬಿಡಿ. ಬನ್ನಿ ಇದೋ ಪ್ರಸಾದ !

ಗಿರಿಯಪ್ಪ:-ಈ ಪ್ರಸಾದವೇನೋ ರುಚಿಯಾಗಿದೆ. ಆದರೆ ಇಷ್ಟುಸಾಕೆ?

ಕಾವೇರಮ್ಮ:—ನಾನು ಅಷ್ಟೂ ಕೂಡ ತಿನ್ನೋದಿಲ್ಲವಲ್ಲ. ನನಗೆ ನೇಮ, ನಾಳೆ ಬೆಳಗಿನವರಿಗೆ.

ಗಿರಿಯಪ್ಪ ;—ಇಷ್ಟು ಶಕ್ತಿಸಾಕೆ, ನನ್ನ ದೇಹದಲ್ಲಿರೋ ಶಕ್ತಿ ? ಆ ಗಡಿಯಾರದ ಸ್ಪ್ರಿಂಗ್ ಸುತ್ತುವುದಕ್ಕೆ, ಒಳ್ಳೆ ತಿಂಡಿ ಮಾಡಿ, ತುಂಬಾ ಕೊಟ್ಟರೆ, ಚಿಮ್ಮ ಸುತ್ತುವುದಕ್ಕೆ ದಮ್ಮುಸಿಕ್ಕುತ್ತೆ.

ಕಾವೇರಮ್ಮ:—ಏನಂದ್ರೀ ! ಇಷ್ಟು ದಿನ ತಿಂದಿರಲ್ಲ—ಸುಲಿದಕ್ಕಿ ಅನ್ನ, ಹೊಟ್ಟಿ ಗೋಧಿ ರೊಟ್ಟಿ, ಟೊಮೋಟೋ ಬಜ್ಜಿ, ಮೊಳಕೆ ಹೆಸರು ಪಾಯಸ, ಮಂಡ್ಯದ ಬೆಣ್ಣೆ—ಇತ್ಯಾದಿಯಾಗಿ, ಅವೆಲ್ಲ ಎಲ್ಲಿ ಹೋದವು ?

ಗಿರಿಯಪ್ಪ :—ಅದೆಲ್ಲ ಇವತ್ತು ಮಾಡಿದ್ದೆಯೇನೆ ?

ಕಾವೇರಮ್ಮ:—ನೀವೇ ಹೇಳಿದ್ದಿರಿ ಓದಿ........ಮಹಾತ್ಮರು ಉಪಾಸ ಮಾಡುತಾರಲ್ಲ ಅದಕ್ಕೆಲ್ಲ ಶಕ್ತಿ ಹಿಂದೆತಿಂದ ಒಳ್ಳೇ ತಿಂಡೀನೇ....ಎಂತ. ಇವತ್ತು ತಿಂದ ಆಹಾರ ಇನ್ನು ನಲವತ್ತೆಂಟು ದಿನಕ್ಕೆ ಶಕ್ತಿಕೊಡುತ್ತೇಂತ, ನೀವೇ ಹೇಳಿದ್ದಿರಿ. ಇವತ್ತಿಗೆ ಸರಿಯಾಗಿ ನಲವತ್ತೆಂಟು ದಿನದ ಹಿಂದೆ ಚಿರೋಟಿ, ವಾಂಗೀಭಾತು, ಮುಂತಾದ್ದೆಲ್ಲ ಮಾಡಿದ್ದೆ ಅದೆಲ್ಲ ನೀವೂ ತಿಂದಿದ್ದಿರಿ. ಈಗ ಆ ಶಕ್ತಿ........

ಗಿರಿಯಪ್ಪ :—ನಾನೇನು ಮಹಾತ್ಮನೆ, ಆಗಿನ ಚಿರೋಟಿ ನೆನೆಸಿಕೊಂಡು, ಈಗ ಶಕ್ತಿಪಡಿಯೋಕೆ........ಏನೆ........

ಕಾವೇರಮ್ಮ :—ಈ ದಿನ ನೀವೂನು ಪುಟ್ಟ ಮಹಾತ್ಮರಾಗಿ ಗೋವಿಂದಪ್ಪನ ಸ್ಪ್ರಿಂಗ್ ಸುತ್ತಿಡಿ, ಆ ಗಡಿಯಾರ ನಡೀಲಿ.

ಗಿರಿಯಪ್ಪ :—ಇಡೀದೊಂದು ಮದ್ದಾನೆ ಶಕ್ತಿಯೇ ಬೇಕು ಅದಕ್ಕೆ, ಹತ್ಯಾರಿಲ್ಲದೇ ಒಳ್ಳೇ ಕೆಲಸಕ್ಕೆ ಒಪ್ಪಿಕೊಂಡೆನಲ್ಲಪ್ಪಾ !

ಕಾವೇರಮ್ಮ :—ಅದೇನೋ ನಿಮ್ಮ ಪಾಡು ! ಬೆಳಗ್ಗೆ ನನ್ನ ಕೊಂಡು ಹೋಗೋ ಅಷ್ಟು ಕೆಲಸ ನನಗೆ ಕಾದಿದೆ ! ಬಾರೋ ರೇಡಿಯೋ. ಮಲಗಿಬಿಡೋಣ ಮೆತ್ತನೆ ಲೇಪಿನ ಮೇಲೆ, ಬೆಚ್ಚಗೆ ಪವಡಿಸಿಬಿಡೋಣ.

ಗಿರಿಯಪ್ಪ :—ಇದೇನೆ, ನಡು ನೀರೊಳು ಕೈಯ್ಯಬಿಡುವರೇ— ಎಂತ ಮಾಡಿಬಿಟ್ಟೆಯಲ್ಲ ! ನಿನ್ನ ಸಹಾಯ, ಗಿಹಾಯ, ಕಡೆಹಾಯಸೋಕೆ........?

ಕಾವೇರಮ್ಮ :—ಇದೋ ಈ ನಿಮ್ಮ ಶುಂಟರಗಾಳಿ, ತುಂಟಪೋರನ್ನ ಹಿಡಿದು ಅವಚಿಕೊಂಡು ಮಲಗಿರುತ್ತೇನಲ್ಲ........ನಿಮ್ಮ ಗಡಿಯಾರದ ಯಜ್ಞ ಮುಗಿಯುವತನಕ........

ಗಿರಿಯಪ್ಪ :—ಅಷ್ಟೇನೇ........

ಕಾವೇರಮ್ಮ :—ಅಷ್ಟೇ ಮತ್ತೆ !

೪

[ಗಡಿಯಾರದ ಸಾಮಾನೆಲ್ಲ ಹರಡಿಕೊಂಡು ಗಿರಿಯಪ್ಪ ಕೂತಿದ್ದಾನೆ. ಮೇಜ ಕುರ್ಚಿ ಇದ್ದರೊಳ್ಳೆಯದು. ಅವನ ಕೈ ಮೈಯೆಲ್ಲ ಮಸಿ ಶರಟಿನ ತೋಳು ಹಿಂದಕ್ಕೆ ಮಡಿಚಿದೆ. ಕಾವೇರಮ್ಮ ಒಳಗಿಂದ ಕಣ್ಣೊರಸಿಕೊಳ್ಳುತ್ತ ಬರುತ್ತಾಳೆ. ಬಿಸ್ಕತ್ತು, ಸಿಗರೇಟು, ಟಾನಿಕ್ಕು ಸೀಸಿ, ಪ್ರಾಮುಖ್ಯವಾಗಿವೆ.]

ಗಿರಿಯಪ್ಪ :—ಗಂಟೆ ಎಷ್ಟಾಯಿತೆ ? ಕಾವೇರೀ ! ಏ ಕಾವೇರೀ !

ಕಾವೇರಮ್ಮ :—ಗಂಟೆ ನನಗೇನುಗೊತ್ತು, ನಿಮ್ಮ ಗಡಿಯಾರ ನಡೀತಾ ಇದ್ದಹಾಗೇ ಕನಸಾಯಿತು ದಿಗ್ಗನೆ ಎದ್ದುಬಂದೆ.

ಗಿರಿಯಪ್ಪ :—ಇನ್ನೂ ಸರಿಯಾಗಿಲ್ಲ ಇದೇಕೋ ಬಹಳ ತೊಂದರೆ ಕೊಡುತಾ ಇದೆ.

ಕಾವೇರಮ್ಮ:—ಇದೇನೂಂದರೆ! ರಾತ್ರಿ ಎರಡು ಗಂಟೆಯಾಗುತಾ ಇದೆ. ಇನ್ನೂ ಕೂತಿದ್ದೀರಿ. ಇದೇನು ಇಷ್ಟೊಂದು ಹೊಗೆ. ಇದೇನೋ ಬಾಯಾಡುತ್ತಾ ಇದ್ದೀರಿ?

ಗಿರಿಯಪ್ಪ :—ಅದೆಲ್ಲ ನಿನಗೇಕೆ, ಹೆಂಗಸರು ಇಲ್ಲಿಗೆಲ್ಲ ಬರಬಾರದು. ನೋಡು ನನ್ನ ಕೈ ಮೈ ಮಸಿಯಾಗಿದೆ. ಮುಖವೂ ಮಸಿಯಾಗಿದೇಂತ ಕಾಣುತ್ತೆ. ಸಾಮಾನೆಲ್ಲ ಎಲ್ಲ ಉಜ್ಜಿ ತಿಕ್ಕಿ ಲೋಲಕಪಟ್ಟಿ, ಗಂಟೆ ಸ್ಪ್ರಿಂಗೆಲ್ಲ ಸರಿಹೋಗಿಸಿದೇನೆ. ದೊಡ್ಡದೊಂದು ಸ್ಪ್ರಿಂಗ್ ಹಾಗೇ ಉಳಿದಿದೆ. ಅದನ್ನ ಸುತ್ತಿ ಚಕ್ರ ಡಬ್ಬೀಲಿ ಇಡುವುದೇ ಕಷ್ಟವಾಗಿದೆ. ಹತ್ತು ಸಾರಿ ಪ್ರಯತ್ನ ಮಾಡಿದ್ದೇನೆ ನೋಡು.

ಕಾವೇರಮ್ಮ:—ಕಾವೇರಿಯಿಂದ ಮಿಂಚಿನ ಶಕ್ತಿ ಬಂದಹೊರತು, ಯಾವ ಕೆಲಸವೂ ಆಗುವಹಾಗಿದಿಲ್ಲ. ಅಷ್ಟೊಂದೆಲ್ಲ ಹೊಗೆಬತ್ತಿ ಸೇದಿದ್ದೀರಿ, ಬಿಸ್ಕತ್ತೋ ಅದೇನೋ ತಿಂದಿದ್ದೀರಿ, ಅದೇನೋ ಟಾನಿಕ್ಕೋ ಏನೋ ಕುಡಿದಿದ್ದೀರೋ ಎಂತೋ. ಎದ್ದು ಬನ್ನಿ ಹೀಗೆ, ಇದಕ್ಕೇ ಬರಬೇಡಾಂತೀರಿ! ಅರ್ಧ ಡಬ್ಬಿ ಸಿಗರೆಟ್ ಸೇದಿದ್ದೀರಿ. ಏನಾಗೋಣ ನಾಳೆ, ಮೇಲಕ್ಕೆದ್ದು ಒಡಾಡಬೇಡವೆ, ಸ್ಪ್ರಿಂಗುಪನ್ಯಾಸ ಮುದ್ರವಾಗಬೇಡವೆ. ಆ ನರಿಗೊಂದಪ್ಪನ ಆಫೀಸಿನಲ್ಲಾದರೂ ಹಾಜರಿಹಾಕಬೇಡವೆ.

ಗಿರಿಯಪ್ಪ :—ಹಾಗಾದರೆ ನಾನು ಹೋಗಿ ಕೈ ಕಾಲು ತೊಳಕೊಂಡು ಬರಲೆ. ದೇವರಿಗೊಂದು ದೀಪಹಚ್ಚಿಡು.

[ಗಿರಿಯಪ್ಪ ಒಳಗೆ ಹೋಗುವನು.]

ಕಾವೇರಮ್ಮ:—[ತನ್ನಲ್ಲಿ ತಾನೆ] ಪಾಪ! ಹೋಗಿಬರಲಿ. ಇದೇನೆಲ್ಲ ಸಾಮಾನು, ಇದೇನೋ ಬಲವಂತ್ ಕಲ್ಪ, ಇದೆಂಥದೋ ಬಿಸ್ಕತ್, ಹೋನ್‌ಹಾರ್ ಹೊಗೇಬತ್ತಿ! ಇವರಿಗಾರು ಹೇಳಿದ್ದಾರು. ಇದೆಲ್ಲ ಬೇಕೆಂತ, ಅಯ್ಯೊ ಗಡಿಯಾರದ ರಿಪೇರಿಯೆ! ಇದೆಲ್ಲ ಕೊಡಿಸಿದ ಸ್ನೇಹಿತರಿನ್ನೆಂಥಾ ಕುಚೋದ್ಯವರೋ ನಾಕಾಣೆ........ನಾನು ಉಪವಾಸದಲ್ಲಿದ್ದೇ ಇದೆಲ್ಲ ಸುತ್ತಿಟ್ಟು, ಸುಳಿಸಿಟ್ಟು, ಜೋಡಿಸಬಲ್ಲೆ. ಪಾಪ ಮಲಗಿಬಿಡಲಿ. ನಾನಾದರೂ ಮುಂದಿಂದೆಲ್ಲ ಮುಗಿಸಿಬಿಡುತೇನೆ............[ಒಳಗೆಹೋದ ಗಿರಿಯಪ್ಪನಿಗೆ] ಬಂದಿರಾ, ಏನೂಂದರೆ, ಕಡ್ಡಿ ಸುಟ್ಟವಾಸನೆ....ಯಾಕೇಂ

ದರೆ ಬೆಂಕಿಕಡ್ಡಿ ಕೆರೆಯೋದು, ತುಪ್ಪದ ದೀಪ ಸಣ್ಣಗೆ ನೀಲಮಣಿಯಾಗಿ ಉರೀತಾ ಇಲ್ಲವೆ. ಬನ್ನಿ ಸಾಕು, ಕಾಗದ, ಕಡ್ಡಿ, ಮಸಿ ತನ್ನಿ ಹಾಗೇನೆ. [ಒಳಗಿದ್ದ ಗಿರಿಯಪ್ಪನಿಗೆ ಹೇಳಿದಾಗ ಆತನು ಒಳಗಿಂದ ಮಾತಾಡುತ್ತ ಬರುವನು.]

ಗಿರಿಯಪ್ಪ :—ಯಾಕೆ, ಕಾಗದ ಲೇಖಣಿ !

ಕಾವೇರಮ್ಮ:—ಗಡಿಯಾರವ ರಿಪೇರಿ ಚಾರ್ಜನ್ನ ನಮ್ಮ ಮನೆಯವರು ಯಾರೂ ಹೇಳಿಕಳಿಸಿದರೂ ಕೂಡಲೆ ಕಳಿಸಿಬಿಡಿ—ಎಂತ ಒಂದು ಕಾಗದ. ಇನ್ನೊಂದರಲ್ಲಿ—ನಾಳೆದಿನ ರಜಕ್ಕೆ ಬರಕೊಳ್ಳಿ ಇಷ್ಟುಹೊತ್ತೂ ಎಚ್ಚರವಾಗಿದ್ದೀರಲ್ಲ ಈ ಹೊಗೇಲಿ, ಇನ್ನೂ ಬೆಳಗ್ಗೆದ್ದು ಹನ್ನೊಂದು ಗಂಟೆಗೆ ಅವಸರದೂಟಮಾಡಿ ಆಫೀಸಿಗೆ ಹೋಗುವುದಕ್ಕಾದೀತೆ ಅದಕ್ಕೇ ಹೇಳಿದ್ದು ರಜಕ್ಕೆ ಬರಕೊಳ್ಳಿ ಎಂತ.

ಗಿರಿಯಪ್ಪ:—ನಿಜವೇಸರಿ. ಗೋವಿಂದಪ್ಪನ ಪ್ರೆಸ್ಸಿಗೂ ಬರಿಯಬೇಕು ಆಫೀಸಿಗೂ ಬರಿಯಬೇಕು. ಆಫೀಸಿನಲ್ಲಿ ನಿದ್ದೆ ಬೆನ್ನಹತ್ತಿದರೆ ಫೀಸುಬರೋದೇ ಕಷ್ಟ. ಬರೀತೇನೆ........ಈ ಗಡಿಯಾರದ ರಿಪೇರಿ ಈ ರಾತ್ರಿಗೆ ಮುಗಿಯುವದೇ ಇಲ್ಲ. ಸರಿಯಾದ ರಿಪೇರಿ ಸಾಮಾನಿಲ್ಲದೆ ನಾನೊಪ್ಪಿದ್ದೇಕೋ ಕಾಣೆ. ನೀನೋ ಈದಿನವೆಲ್ಲ ಮಡಿ, ಉಪವಾಸ, ಪೂಜೆ, ಮಂಗಳಾರತಿಯಲ್ಲೇ ಇದ್ದೀಯೆ. ನನಗ್ಯಾರು ದಿಕ್ಕು.

ಕಾವೇರಮ್ಮ :—ಸಾಯ್‌ನಾಥ !

ಗಿರಿಯಪ್ಪ:—ದೇವರೊಂತ ಎತ್ತರದಲ್ಲಿ ಕೂರಿಸಿ ಹೂವೇರಿಸಿದ್ದಿ ! ಈಗ ಕೆಳಗಿಳಿದುಬಾಪ್ಪ ಸಾಯ್‌ನಾಥ, ನನ್ನ ಗಡಿಯಾರ ರಿಪೇರಿ ಮಾಡಪ್ಪಾ........

ಕಾವೇರಮ್ಮ:—ರಿಪೇರಿ ಮಾಡಪ್ಪಾ ಎಂತಲೇ ಕೇಳಿಕೊಳ್ಳಬೇಕು. ನಮ್ಮ ಕಷ್ಟ ಏನೇ ಇರಲಿ ಅದರಲ್ಲಿ ಹೊಕ್ಕು ಬಳಸುವಂಥಾ ಮಹಾತ್ಮನನ್ನೇ ನಾವು ಪೂಜಿಸುವುದು. ನನಗಿದೆ ಆ ಶಕ್ತಿ ನಾನು ಕರೆದರೆ ಬರುತ್ತಾನೆ. ನೀವು ಹತ್ತಿರ ಇರಿ ಸಾಕು ನಾನು ಮುಗಿಸಿಬಿಡುತ್ತೇನೆ.

ಗಿರಿಯಪ್ಪ:—ನೀನು ಮಡಿಯಲ್ಲವೆ. ಇದೆಲ್ಲ ಹೊಲಸಲ್ಲವೆ. ಸೀಮೆ ಎಣ್ಣೆ ಪೆಟ್ರೋಲು, ಇದೆಂಥದೋ ಎಣ್ಣೆ, ಈ ಕಬ್ಬಿಣದ ಚೂರುಪಾರು....

ಕಾವೇರಮ್ಮ:—ಆದೇ ಮಡಿಯಾಗುತ್ತೆ. ಅದೆಲ್ಲ ಪೂಜೆ ಸಾಮಾನು ಕೆಲಸಗಾರರಿಗೆ. ಬನ್ನಿ ಕೂತುಗೊಳ್ಳಿ.........

ಗಿರಿಯಪ್ಪ—ಎರಡು ಕಾಗದಾನೂ ಗೀಚಿಹಾಕಿಬಿಟ್ಟೆ. ನಿನ್ನ ಹತ್ತಿರ ಕೂತಿದ್ದು. ಆಮೇಲೆ ಗಡಿಯಾರದ ಸ್ಪ್ರಿಂಗ್ ಕೈಲಿ ತೆಗೆದುಕೊಳ್ಳುತೇನೆ. ಆಗಬಹುದೋ, ಆಗಬೋದೋ, ಏನೇ! ಏನೇ!

ಕಾವೇರಮ್ಮ:—ಶ್, ಶ್, ಶ್, ಸುಮ್ಮನೆ ಇರಬಾರದೆ ಕೊಂಚ! ಕೈಲಿ ಸ್ಪ್ರಿಂಗಿದೆ ನೋಡಿ!

ಗಿರಿಯಪ್ಪ:—ಹಾ ಆ ಜಾ ಆ! ಆಕಳಕೆ ನನಗೆ! (ಅಲ್ಲೇ ಒರಗಿಕೊಳ್ಳುವನು)

ಕಾವೇರಮ್ಮ:—ಮಲಗಿಬಿಟ್ಟರಾ! ಹೋಗಲಿ. ನಿದ್ದೆಯಾದರೂ ಆಗಲಿ!

ಗಿರಿಯಪ್ಪ:—ರೇಡಿಯೋ ಬಂತು, ಹಿಡುಕೊ ಇಲ್ಲಿ ಬಿಡಬೇಡ ಹಿಡುಕೊಳ್ಳಿ! ಹೋಯಿತು ಹೋಯಿತೂ!

ಕಾವೇರಮ್ಮ:—ಅಯ್ಯೊ, ಕನವರಿಕೇನೆ! ಕನಸಲ್ಲಿ ಮನಸಲ್ಲಿ ಗಡಿಯಾರ. ಯಾರನ್ನ ಹಿಡುಕೊಳ್ಳೋದು? ಏನೂಂದರೆ!

ಗಿರಿಯಪ್ಪ:—ಕೂಸೇ! ರೇಡಿಯೊ! ಹಿಡುಕೊ! ಕಾವೂ! (ಕನಸಿನಲ್ಲಿ)

ಕಾವೇರಮ್ಮ:—ಚಿಮ್ಮೋ ಸ್ಪ್ರಿಂಗ್ ಬಿಟ್ಟು ಸಧ್ಯ, ಕಾವೂಂತಲೂ, ಕೂಸೂಂತಲೂ, ಹೇಳುತೀರಲ್ಲ. ಏನೂಂದರೆ ಎಚ್ಚರವಾಯಿತೆ? ಅವರು ಏಳುಲ್ಲ! ಕೂಸು ಎದ್ದು ಕೂಗುವುದು—ದೇದೇ, ಗೀಗೀ, ಪೇಪೇ ಊ ಊ ರೇಡ್ಯೊ ಹೋಗಮ್ಮ ನಿಮ್ಮಪ್ಪ ಅಲ್ಲಿ ಸುರುಳಿಕೊಂಡು ಕನವರಿಸ್ತಾ ಇದ್ದಾರೆ ಹೋಗು ಗಡಿಯಾರ ರಿಪೇರಿಮಾಡಿಬನ್ನಿ ಎಂತ ಕಿವಿಹಿಡಿದು ಎಳ. ಹೋಗು ಹಾಗೇ (ಗಿರಿಯಪ್ಪ ಏಳುವನು.)

ರೇಡಿಯೊ:—ದ್ದೆದ್ದೆ! ಪ್ಪಪ್ಪಪ್ಪಾ! ಊ ಊ!

ಗಿರಿಯಪ್ಪ:—ಅಬ್ಬಬ್ಬಾ! ಅದೇನು ಸ್ಪ್ರಿಂಗೆ! ಚಿಮ್ಮಿಕೊಂಡು ಹೋಗುತಾ ಇತ್ತು.

ಕಾವೇರಮ್ಮ:—ರೋಡಿಯೋ, ನೀನು ನನ್ನ ಪಕ್ಷಕ್ಕೆ ಅಂಕುಶವಾಗಿ

ಬಿಟ್ಟಿದ್ದೀಯಾ? ಇಂಥಾ ಆನೆಗೆ ಅಂಕುಶಬೇಡವೆ? ಅದಿರಲಿ ಹಾವೊಂದಿ ರಲ್ಲ ಹಾವು ಕಾಣಬಾರನು ಕನಸಲ್ಲಿ! ಹೆಡೆಬಿಡಶೊ ಇಲ್ಲವೊ! ಎಚ್ಚರ ವಾಯಿತೆ?

ಗಿರಿಯಪ್ಪ:—ಹಾವೇನೋ ಸರಿ! ಆ ವಿಚಾರವಲ್ಲ ನಾನು ಹೇ ಳೋದು. ಆ ಸ್ಪ್ರಿಂಗ್ ಉಪನ್ಯಾಸ ಮುಂದುವರಿಸಬಹುದು ಹೀಗೆಂತ ಕನಸನಲ್ಲಿ ಕಂಡೆ ಮಹನೀಯರೆ, ನಮ್ಮ ಈಗಿನ ನೂತನ ವಿಚಾರಗಳನ್ನೆಲ್ಲ ನಮ್ಮ ಸನಾತನ ಅಭಿಪ್ರಾಯಗಳಿಗೆ ಹೋಲಿಸಬಹುದು. ಮಹನೀಯರೆ ಮತ್ತು ಮಹಿಳೆಯರೆ! ಆದಿಶೇಷನೆಂದರೇನು? ಅವನು ಸುರುಳಿಸುತ್ತಿ ಕೊಂಡಿದ್ದಾನೆಂದರೇನು! ಆ ಸುರುಳಿಯಮೇಲೆ ಶ್ರೀ ಮಹಾ ವಿಷ್ಣುವೇ ಮಲಗಿರುವನು ಎಂದರೇನು? ಯೋಚಿಸಿದ್ದೀರಾ? ಆಶ್ಚರ್ಯ ಆಶ್ಚರ್ಯ! ಎನೇ ಎಲ್ಲಿ ಹೋಗಿಬಿಟ್ಟೆಯೆ, ಕೇಳು ನನ್ನ ಉಪನ್ಯಾಸ, ಕೇಳುತ್ತೀಯೆ....

ಕಾವೇರಮ್ಮ:—(ಒಳಗೆ ಹೊರಗೆ ಕೆಲಸದ ಗದ್ದಲದಲ್ಲಿ ಓಡಾಡುತ್ತಾ ........) ಕೇಳುತ್ತಾನೇ ಇದ್ದೇನೇಂದ್ರೆ ಹೇಳಿಕೊಳ್ಳೀ........

ಗಿರಿಯಪ್ಪ:—ಎಲ್ಲಿದ್ದೆ, ಏನು ಹೇಳುತಾ ಇದ್ದೆ? ಹೊ, ಗೊತ್ತಾ ಯಿತು—ಶ್ರೀ ಮಹಾವಿಷ್ಣು ಶಕ್ತಿಯೇ, ಎಂದರೇನು, ಇಡಿಯ ಜಗತ್ತನ್ನೇ ನಡೆಸಿಕೊಂಡು ಹೋಗುವ ವಿಷ್ಣುಶಕ್ತಿಯು ಸುರುಳಿಸುತ್ತಿರುವ ಆದಿಶೇಷ ನಲ್ಲಿದೆ. ಆದಿಶೇಷನೇ ಮಹತ್ತಾದ ಒಂದು ಸ್ಪ್ರಿಂಗ್! ಅಹಹಹಹಾ! ಏನು ಸನಾತನರ ಅಭಿಪ್ರಾಯ! ಕಾವೂ, ನಾವು ಪೂಜೆಮಾಡುತ್ತಿರುವು ದಾದರೂ ಏನೆಂದು ತಿಳಿದೆ. ಹೇಳು, ಹೇಳು ನೋಡೋಣ........

ಕಾವೇರಮ್ಮ:—ಕಾಫಿ ಸೋಸುತ್ತಾ ಇದ್ದೇನೆ. ನಿಮ್ಮ ಮಾತು ಕೇಳುತ್ತಾ ಕೈ ಸುಟ್ಟುಕೊಂಡೆ. ಏನೂಂತ ಹೇಳಿಬಿಟ್ಟು ಎದ್ದೇಳಿ, ಮುಖ ತೊಳೆಯಿರಿ! ಅಥವ ಕಾಲಪುರುಷರಿಗೇನು ಬೆಡ್‌ಕಾಫೀ, ಗೀಫೀನೋ? (ಕುಚೋದ್ಯಮಾಡುತ್ತಾ)

ಗಿರಿಯಪ್ಪ:—ನನ್ನ ಅಭಿಪ್ರಾಯ ಅರ್ಥವಾಯಿತೆ? ನಾವು ಪೂಜಿ ಸುತ್ತ ಇರುವುದಾದರೂ........ಏನೇ........ಕಾವೂ........

ಕಾವೇರಮ್ಮ:—ಅದೇ ಸ್ಪ್ರಿಂಗ್, ಗಡಿಯಾರದ ಸ್ಪ್ರಿಂಗ್!

ಗಿರಿಯಪ್ಪ:—ಹಾಗೇ! ನಿನಗೂ ಅರ್ಥವಾಯಿತು ಬಿಡು! ಅನಂತ

ಸಾಗರದ ಅಲೆಗಳ ಮೇಲೆ ಸುರುಳಿಸುತ್ತಿ ಹೆಡೆಯೆತ್ತಿಕೊಂಡಿರುವ ಆದಿಶೇಷನೇ ಸ್ಪ್ರಿಂಗ್. ಅದರನಂತರ—ಶೇಷಶಾಯಿಯೇ ಪ್ರಪಂಚದ ಆಗುಹೋಗುಗಳನ್ನು ಕಾದುಕೊಳ್ಳುವ ಮಹಾಶಕ್ತಿ—ನಮಸ್ತೇ ಸ್ಪ್ರಿಂಗುರೂಪೀ, ನಮಸ್ತೇ ಮಹಾಚಿಮ್ಮಿ ಪ್ರತಾಪೀ ನಮಸ್ತೇ ಗಡಿಯಾರ ರೂಪೀ....

ಕಾವೇರಮ್ಮ—ನಮಸ್ತೇ ರಿಸ್ಟ್‌ವಾಚು ರೂಪೀ........! ಏಳೀಂದ್ರೆ, ಗೋವಿಂದಪ್ಪನ ಗಡಿಯಾರದ ಗತಿಯೇನಾಯಿತೆಂತ ನೋಡಿಕೊಳ್ಳಿ.

ಗಿರಿಯಪ್ಪ:—ಹೌದು ಹೌದೂ! ಮರೆತುಬಿಟ್ಟಿದ್ದೆ! ಇವತ್ತು ನನ್ನ ಉಪನ್ಯಾಸಕ್ಕೆ ದುಡ್ಡು ಕೊಡೋರು ಯಾರು? ಗಡಿಯಾರ ಕೊಟಕೊಟಾಂದರೆ ಗೋಂದಪ್ಪನಾದರೂ ಇಪ್ಪತ್ತುರೂಪಾಯಿ ಕೊಟ್ಟಾನು. ಹೌದೇ, ಕಾವೂ! ಈದಿನ ರಜ ತಗೊಬೇಕಲ್ಲ!

ಕಾವೇರಮ್ಮ:—ಪಾಪ ಗಂಡಸರೇ ಹಾಗೆ. ಯಾರೇನೆಂದರೆ ಅದನ್ನೆ ನಂಬಿಬಿಡುತ್ತಾರೆ. ಬೆಳ್ಳಗಿದ್ದರೆ ಹಾಲು, ತೆಳ್ಳಗಿದ್ದರೆ ರೇಶ್ಮೆ ಬಣ್ಣಗಿದ್ದರೆ ಬಂಗಾರ, ಮಿಣ್ಣಗಿದ್ದರ ಹೆಣ್ಣು. ನಿನ್ನೆ ರಾತ್ರಿಯೆಲ್ಲ ನಿದ್ದೆಗೆಟ್ಟು ಈಗ ಮಲಗಿದ್ದಾರೆ ಸಧ್ಯ. ನಾನು ನಡುವೆ ಉಪಾಯ ಹೂಡದಿದ್ದರೆ ಬೆಳಗೇ ಆಗಿಬಿಡುತಿತ್ತು ಈ ಗಡಿಯಾರದ ಮಂಗಳ ಮುಗಿಯೊಹೊತ್ತಿಗೆ ಒಂದು ಡಬ್ಬಿ ಹೊಗೆ ಬತ್ತಿಯುಲ್ಲ ಸೇದಿ ಸೇದಿ ಕಣ್ಣುಕೆಟ್ಟು ಮೈ ಕೆಟ್ಟು ರಗಳೆಯಾಗಿ ಹೋಗುತಿತ್ತು. ಆ ಟಾನಿಕ್ಕೂ ಬಿಸ್ಕತ್ತೂ ಹಾಗೇ ಇರಲಿ. ಗಡಿಯಾರವಂತೂ ಠೀಕುಠಾಕಾಗಿ ಕೂತಲ್ಲೆ ನಡೀತಾ ಇದೆ. ಅವರೆದ್ದರೆ ನೋಡಿ ಸಂತೋಷಪಟ್ಟಾರು. ಆ ಸ್ಪ್ರಿಂಗು ಅದೆಷ್ಟು ಬಿಗಿಯಾಗಿರೋಣ! ಅವರಿಗಿಂತ ಅದು ಬಿರುಸು. ಅದನ್ನು ಅದರ ಡಬ್ಬಿಯೊಳಗೆ ಸುತ್ತಿ ಸೇರಿಸುವುದೇ ಕಷ್ಟವಾಗಿತ್ತು. ಗುರುವಾರದ ಉಪವಾಸ ಸಾರ್ಥಕವಾಯಿತು. ಬಿಡು. ಸಾಯ್‌ನಾಥನ ಅನುಗ್ರಹ ಈ ರೀತಿಯಾಗಿಯೂ ನೆರವಾಯಿತಲ್ಲ........ಲೇ ಮಹಡಿ ಮನೆ ಗೋಪಿ, ಗೋಪೀ, ಬಾಪ್ಪ ಇಲ್ಲಿ. ನಿಮ್ಮ ತಂದೆಮನೇಲಿ ಇದ್ದಾರೆಯೆ? ಇಲ್ಲವೆ! ಸರಿಬಿಡು. ಈ ಚೀಟಿತಗೊ. ಇದರಲ್ಲಿ ಇರುವುದನ್ನ ಗೋವಿಂದ ಮುದ್ರಣಾಲಯದವರಿಗೆ ರಿಂಗ್‌ಮಾಡಿ ಕರೆದು ಟೆಲಿಫೋನ್‌ನಲ್ಲಿ ಹೇಳಿಬಿಡು. ವಿಷಯ ಇಷ್ಟೆ—ಗೋಡೆ ಗಡಿಯಾರ ಸರಿಯಾಯ್ತು.. ರಿಪೇರಿ ಚಾರ್ಜು ಆಳಿನ ಕೈಲಿ ಕಳಿಸಿದರೆ ಗಡಿ

ಯಾರ ಈ ಕ್ಷಣವೇ ಕಳಿಸಿಕೊಡುತ್ತೇಂತ ನಮ್ಮ ಮನೆಯವರ ಹೆಸರಲ್ಲಿ ಹೇಳು. ಹೌದು ಗೋವಿಂದ ಮುದ್ರಣಾಲಯ! ಹೇಳಬಿಡು ಅರ್ಜಂಟೆಂತ. ಹೇಳತೀಯ! ಜಾಣ, ನೀನು!

ಕಾವೇರಮ್ಮ:—ಎದ್ದಿರಾ ಏಳಿ, ಬಲಮಗ್ಗುಲಲ್ಲಿ ಏಳಿ, ಈಗ ಬೆಳಗಾಯಿತೇ, ಹೆಚ್ಚೇನು ಹೊತ್ತಾಗಿಲ್ಲ ಹತ್ತೇಗಂಟೆ. ಇಲ್ಲ, ಇಲ್ಲ, ಅವಸರವೇನೂ ಇಲ್ಲ. ನಿಮ್ಮ ಆಫೀಸರು ಹೇಳಿಕಳಿಸಿದ್ದಾರೆ ರಜಕೊಟ್ಟಿದ್ದಾರಂತೆ, ಆದರೆ ಇದಿಷ್ಟು ಕಾಗದಕ್ಕೆಲ್ಲ ಅದೇನೋ ಮಾಡಿಡಬೇಕಂತೆ. ಎದ್ದುಬಿಡಿ. ಸಾಯಿಬಾಬನಿಗೆ ನಮಸ್ಕಾರಮಾಡಿ, ಸ್ನಾನಮಾಡಿ, ಪಾರಣೆಮಾಡಿಬಿಡಿ.

ಗಿರಿಯಪ್ಪ:—ಸಾಯಿನಾಥನ ಎದುರಿಗೆ ನಿಲ್ಲುವುದಕ್ಕೇ ಶಕ್ತಿಯಿಲ್ಲ ನನಗೆ ಹಿಡಿದ ಕೆಲಸ ಮುಗಿಸಿಬಿಡದೆ ಮಲಗಿಬಿಟ್ಟೆ ಅದೇ ನನ್ನ ತಪ್ಪು. ಅಕ್ಕೊ, ಅದೆಲ್ಲಿತ್ತೇ ರೇಡಿಯೋ ಕಿವೀಗೆ ಲೋಲಕ್ಕು!

ಕಾವೇರಮ್ಮ:—ಪ್ರೆಸ್ಸಿನಲ್ಲಿ ಒಂದು ಲೋಲಕ್ಕು ಅಲುಗಾಡುತ್ತೆ. ಅದರ ಗುರುತಾಗಿ ಇಲ್ಲಿ ರೇಡಿಯೋ ಕಿವೀಲೂ ಅಲುಗಾಡುತ್ತೆ ಲೋಲಕ್ಕು.

ಗಿರಿಯಪ್ಪ:—ಗಡಿಯಾರ ರಿಪೇರಿ ಮಾಡಿದೆಯಾ, ಮಾಡಿಬಿಟ್ಟೆಯಾ!

ಕಾವೇರಮ್ಮ:—ಗಡಿಯಾರಕ್ಕೆ ಜೀವಬಂದು, ಅದು ಗೋವಿಂದನ ಸನ್ನಿಧಾನಕ್ಕೆ ಹೋಗಿ, ಈ ಲೋಲಕ್ಕೂ ಪ್ರಸಾದ ಕಳಿಸೀದೆ ಎಂದೆ. ನನ್ನ ಚಂದ್ರಾವಳೀಗೆ ಅದೇ ಪೀಠಿಕೆ ಎಂದೆ.

ಗಿರಿಯಪ್ಪ:—ಅಲ್ಲವೆ, ಆ ಗಡಿಯಾರದ ಸ್ಪ್ರಿಂಗ್ ಸುತ್ತಿದವಳೂ ನೀನೆ ಈ ಮನೆ ಸ್ಪ್ರಿಂಗ್ ಸುತ್ತಿದವಳೂ ನೀನೇ ಆದೆಯಲ್ಲೇ!

ಕಾವೇರಮ್ಮ:—ನಾನು ಹೆಂಗುಸು, ನನಗೆಲ್ಲಿ ಆ ಶಕ್ತಿ ಬರತ್ತೇಂದರೆ.

ಗಿರಿಯಪ್ಪ:—ಎಲ್ಲಿ ಬಂತೆ? ಹೇಳುತ್ತೇನೆ ಹತ್ತಿರಬಾ!

ಕಾವೇರಮ್ಮ:—ನಿಮ್ಮ ಹತ್ತಿರ ಯಾಪಾಗೆಂದರೆ ಆವಾಗ ಬರೋನು ಇಲ್ಲಿದ್ದಾನೆ. ಹೋಗೋ ಮರಿ, ನಿನ್ನೂ ಕೂಡ ಒಂದು ಮಹಾ ಚಿಮ್ಮಿಯನ್ನೇ ಮಾಡಿಬಿಡುತ್ತಾರೆ; ಅವರು.

ಗಿರಿಯಪ್ಪ:—ಅವನು ಬೇಡ ನೀನು ಬಾ, ಆ ಗಡಿಯಾರದ ಸ್ಪ್ರಿಂಗ್ ಮಾಡಿದ ಗಾಯಾನಾದರೂ ನೋಡೋಣ.

ಕಾವೇರಮ್ಮ:—ಈಗ ಬೇಡಾಂದೆ !



# ೩. ಗುಂಡು

ರಾತ್ರಿ ಮೂರು ಗಂಟೆ! ಈಗತಾನೆ ಮುಗಿಯಿತು ಆ ಕನಸು! ಕನಸು ಮುಗಿದರೂ ಖಾಸೀಂ ಮುಗಿದಿಲ್ಲ! ಕುದುರೆ ಲಗಾಂ ಹಿಡಿದು ಕೊಂಡು ಅವನು ಓಡಾಡುತ್ತಲೇ ಇದ್ದಾನೆ. ಅವನ ಹಿಂದೆ ಆ ಕುದುರೆಯೂ ಖಲ್ ಖಳಕ್ ಖಳ್ ಖಲಕ್—ಎಂತ ಗೊರಸು ತೂಗಿಡುತ್ತಾ ನನ್ನ ಮೆದು ಳಲ್ಲೆಲ್ಲ ಸುತ್ತಾಡುತ್ತ ಇದೆ. ಈಗ ಅವನಿಗೂ ಅದಕ್ಕೂ ಅಕ್ಷರ ಸಮಾಧಿ! ಹಾಗಾದರೆ ಕಾಟವಿಲ್ಲ ನನಗೆ ಇನ್ನು ಮುಂದೆ.

೦ ೦ ೦

ಶಿವರಾಂಪೇಟೆಯಲ್ಲಿ ನಮ್ಮ ಮನೆ. ನಮ್ಮ ಅಣ್ಣ ಅಲ್ಲಿಗೆ ವರ್ಗ ಮಾಡಿಸಿಕೊಂಡು ಬಂದರು. ಅವರ ಹಿಂದೆ ಕುದುರೆ ಬಂತು. ಅದರ ಸಂಗಡ ಖಾಸೀಂ ಬಂದ; ಮತ್ತು ಪಿಚ್ಚಾಟಿ ಎಂತ ನಾಯಿ ಬಂತು; ಹಾಗು ಬಿರ್ರಾಲಿ ಎಂತ ಬೆಕ್ಕು ಬಂತು; ಇನ್ನೂ ತಿಮ್ಮಣ್ಣ ಎಂತ ಕೋತಿ, ಮಿಠ್ಠಿ ಎಂತ ಗಿಣಿ ರಾಮ—ಹೀಗೆ ಏನೇನೋ ಬಂದವು. ಅವೆಲ್ಲ ಈ ಖಾಸೀಮನ ಕುದುರೆಗೆ ಸೇರಿದ ಮಕರ ರಾಶಿ! ಇವೆರಡು ವ್ಯಕ್ತಿಗಳಂತೆ ನನ್ನ ಮೆದುಳಿನ ದಿವಾನಖಾನೆಯಲ್ಲಿ ಠಲಾಯಿಸುವುದಕ್ಕೇಂತ ಹಠಮಾಡಿದ ದಿನವೇ ಅವಕ್ಕೂ ಅಕ್ಷರ ಗೋರಿ. ಆದರೆ ಈ ದಿನ ಅವರ ವಿಚಾರ ಬೇಡ.

೦ ೦ ೦

ಅಣ್ಣ ಭಂಡಾರಪ್ಪನ ಸಂಗಡ ಒಂದು ಖಾಸ ಬಂಗಲೀನೇ ಬಂದಿತ್ತು. ಆದ್ದರಿಂದ ಬಾಡಿಗೆ ಇದ್ದವರನ್ನ ಬಿಡಿಸಿ ಇಡಿಯ ಮನೆಯನ್ನೇ ಅವರಿ

ಗೊಪ್ಪಿಸಿಬಿಟ್ಟೆವು. ಆ ಖಾಸ್ ಬಂಗಲಿಯಲ್ಲಿ ನಾವೂನೂ ಸೇರಿ ಕೊಂಡೆವು.

ಖಾಸೀಂ ಹುಡುಗತನದಿಂದ ಈ ನಮ್ಮಣ್ಣನ ಮೋರೆ, ಮೀಸೆ, ಗಂಡು ಠೀವಿಗಳಿಗೆ ಬೆರಗಾಗಿ ಗಿರಿಯೂರಿಂದ ಇಲ್ಲಿಗೆ ಬಂದಿದ್ದನು. ಕುದುರೆಗೆ ಹುರುಳಿ, ನಾಯಿಗೆ ಖಂಡ, ಗಿಳಿಗೆ ಹಣ್ಣು ಮುಂತಾಗೆಲ್ಲ ಸರಬರಾಜು ವಿವರವನ್ನೆಲ್ಲ ಖಾಸೀಂ ಬಲ್ಲ ಮತ್ತು ಅವನು ಅದನ್ನೆಲ್ಲ ನಿಭಾಯಿಸಬಲ್ಲ. ಖಾಸೀಂ ನಮ್ಮ ಶಿವರಾಂಪೇಟೆಗೆ ಬಂದಾಗ್ಗೆ ಚಿಗುರು ಮೀಸೆ ಗೆಣೆಯ. ತೆಳ್ಳಗೆ ಕೆಂಪಗೆ ರಸದಾಳಿ ಕಬ್ಬಿನ ಹಾಗೆ ಇದ್ದ! ಅಂದಕ್ಕೆ ಹಾಗಾದರೆ ಶಕ್ತಿ ಗಂತು ಉಕ್ಕಿನ ಕೈಕಾಲುಗಳು. ಎಲ್ಲ ವಿಚಾರಕ್ಕೂ ನಮ್ಮೊಂದಿಗೆ ಹಿಂದು ವಾದರೂ ನಮಾಜು ಸಮಯದಲ್ಲಿ ಅಂಗಳದಲ್ಲಿನ ಗುಲಾಬಿ ಗಿಡದ ಬಳಿಗೆ ಓಡಿಬಿಡುವನು. ನಮ್ಮಣ್ಣ ಅತ್ತಿಗೆ ಅವನಿಗೆ ಅಡ್ಡಿ ಬರುವುದಿರಲಿ ಅವನಿ ದಲ್ಲಿ ಆ ಕಾಲದಲ್ಲಿ ಯಾವ ಸದ್ದೂ ಮಾಡರು. ನಮಾಜು ಮುಗಿಸಿ ಬಂದಾಗ ಅವನ ಮುಖ ಆನಂದದಿಂದ ಬೆಳಗುತ್ತ ಇರುತ್ತಿತ್ತು. ಖಾಸೀಂ ನಿಗೆ ನಮ್ಮನ್ನು ಕಂಡರೆ ಸದರ, ಮಕ್ಕಳನ್ನು ಕಂಡರೆ ಆದರ, ಕುದುರೆ ಕಂಡರೆ ಹೆಮ್ಮೆ, ರಾಯರನ್ನು ಕಂಡರೆ ಭಕ್ತಿ, ಮತ್ತೆ ಅಮ್ಮಾವರನ್ನು ಕಂಡರೆ ಭಯ.

ಕಾಶಿ ಕೆಂಪು ಕುದುರೆ, ಹೆಣ್ಣು! ಬಾಬಾಬುರ್ಡರವರ ಬಿಜಲಿ ಕುದುರೆಯ ದೂರದ ಸಂಬಂಧದ ರಕ್ತ, ಕಾಶಿಯ ಮೈಯಲ್ಲಿ ಹರಿಯು ತ್ತಿತ್ತು. ಆ ಹೆಮ್ಮೆಯ ವಿಚಾರವನ್ನು ಬಲ್ಲದೋ ಏನೋ ಎಂಬಂತೆ ಅದು ಠೀವಿಯಿಂದ ಹೆಜ್ಜೆಹಾಕುತ್ತಿತ್ತು, ಮತ್ತು ಅದು ಪ್ರೀತಿಯನ್ನು ತನ್ನದೇ ಆದ ಒಂದು ವಿಶೇಷ ರೀತಿಯಲ್ಲಿ ವ್ಯಕ್ತಪಡಿಸುತ್ತಿತ್ತು.

ಕಾಶಿ ನಮ್ಮ ಪಕ್ಷಕ್ಕೆ ಕಾಮಧೇನು. ಅದು ಗಂಡು ಕುದುರೆ ಎಂತ ಭಾವಿಸಿದಿರೇನು? ಮಿಲಿಟರಿ ಇಲಾಖೆಯಲ್ಲಿದ್ದು ಬಂದಿದ್ದುದರಿಂದ ಅದು ತೋರಿಕೆಯಲ್ಲಿ ಹೆಣ್ಣಾಗಿದ್ದರೂ, ಚಟುವಟಿಕೆಯಲ್ಲಿ ಗಂಡು. ಚೇಷ್ಟೆಯಲ್ಲಿ ಹೆಣ್ಣು. ತನಗೆ ಬೇಕಾದವರ ದನಿ ಕೇಳಿಸಿದರೆ ಹು ಹು ಹು ಗುಟ್ಟಿ ಹತ್ತಿರ ಕರೆಯುವುದು. ಪಾಯಸ ಮಾಡಿದ ದಿವಸ ಬರಿ ಪಾತ್ರೆಯನ್ನಾದರೂ ನೆಕ್ಕಿ ಸಿದಹೊರತು ಬಿಡದು.

ಕಡೆಗೆ ಅದು ನಮ್ಮಜ್ಜಿಯ ದೆಸೆಯಿಂದ ಕಾಶಿಯಾಗಿಬಿಟ್ಟಿತ್ತು. ಅದು ಲಕ್ಷ್ಮಿಯೇ ಆಗಿ ನಮ್ಮ ಮನೆ ಸೇರಿತೆಂದೂ, ಅದರ ಕಾಲುಬುಡದಲ್ಲಿ ಏಳೇಳು ಕೊಪ್ಪರಿಗೆ ಹಣವುಂಟೆಂದೂ ನಮ್ಮಜ್ಜಿ ಹೇಳುತ್ತಿದ್ದರು ಮತ್ತು ಅದಕ್ಕೆ ಪ್ರದಕ್ಷಿಣೆಮಾಡಿ ಹೂವು ಕುಂಕುಮ ಏರಿಸಿ, ಕಡಲೆ ಬೆಲ್ಲ, ತಿನ್ನಿಸಿದ ಹೊರತು, ಅವರು ಊಟವೇ ಮಾಡರು. ನಮ್ಮಜ್ಜಿ ಮುತ್ತುಗದೆಲೆ ಹಚ್ಚಿ ಅಂಗಡಿಗೆ ಕಳಿಸಿ ದುಡ್ಡು ತರಿಸಿಯಾದರೂ ಕುದುರೆಗೆ ನೈವೇದ್ಯ ಮಾಡು ಮ. ನಾವು ಆ ಸಮಯಕ್ಕೆ ಅಲ್ಲೇ ಇದ್ದು ಲಾಭ ಪಡೆಯುತ್ತಿದ್ದೆವು.

ಖಾಸೀಂ ರಜಹೋದ. ಕೂಸಪ್ಪ ಬದಲಿ ಬಂದ. ಪಾಪ, ಅವನು ಈ ಏಳು ಕೊಪ್ಪರಿಗೆಯ ಕಾಶಿಯ ಸಂಗಡ ಏಗಲಾರದೆ ಹೋದ.

ಒಂದು ದಿನ ಬೆಳಗ್ಗೆ ಬಂದ ಕೂಸಪ್ಪ. ಅಮ್ಮಾವರ ಹತ್ತಿರ ಕೇಳಿ ಹುರುಳಿ ಇಸುಗೊಂಡ. ತೋಪಡದ ಚೀಲಕ್ಕೆ ತುಂಬಿ ಇಟ್ಟುಗೊಂಡ. ಗೋದಲಿ ಒಳಗಿದ್ದ ಹುಲ್ಲೆಲ್ಲ ತೆಗೆದುಬಿಟ್ಟ. ಕರಾರು ತೆಗೆದುಕೊಂಡ ಕೆರೆಯಲಿಕ್ಕಾರಂಭಿಸಿದ. ಬುರುಸ್ ಹೊಡೆದು ತೆಂಗಿನ ನಾರಿನ ಚೀಲದಲ್ಲಿ ಉಜ್ಜುವುದಕ್ಕಾರಂಭವಾಗಬೇಕಾಗಿತ್ತು. ಕರಾರಿಂದ ಕೆರೆಕೆರೆದು ಮಾಲೀಷ್ ರಂಗೇಲಿ ಹಾಕುವುದಕ್ಕಾರಂಭಿಸಿದ್ದ. ಕೂಸಪ್ಪ ಮುತುವರ್ಜಿಯಿಂದ ಕೆಲಸಮಾಡುತ್ತಿದ್ದ. ಅವನ ಕೆಲಸವೆಲ್ಲ ಮಿಲಿಟರಿ ಕೆಲಸವಾದರೂ ಅವನು ಮಾತ್ರ ಹುರಿಹಿಟ್ಟಿನಹಾಗೇ ಇದ್ದ.

ಕಾಶಿಗೆ ಅದೆಲ್ಲ ಏನುಗೊತ್ತು. ಅದಕ್ಕೆ ಮೊದಲು ಬೇಕಾಗಿದ್ದುದು ಹುರುಳಿ—ಬೆಂದ ಹುರುಳಿ—ಗೂಟದಲ್ಲಿ ನೇತಾಡುತ್ತಿದ್ದ ಘಮ ಘಮ ಹುರುಳಿ, ಅನಂತರ ಈರುಳ್ಳೀ-ಬೆಲ್ಲ. ಅದರ ಬದಲಾಗಿ ಕೂಸಪ್ಪ ಬೇಡದು ದೆಲ್ಲ ಮಾಡುತಿದ್ದ. ಕೂದಲೆಲ್ಲ ಸಿಕ್ಕಾಗಿದ್ದರೆ ನಮ್ಮ ರಂಬೆ ಹೇಗಾಡು ವಳೋ ಅಮ್ಮನ ಬಾಚಣಿಗೆ ಕಂಡಾಗ, ಹಾಗೇ ಆಡಲಾರಂಭಿಸಿತು ಕಾಶಿ. ಅಮ್ಮ ಹೇಗೆ ರಂಬೆಗೆ ಬಿಸಿ ಬಿಸಿ ಗುದ್ದು ಕೊಡುವಳೋ ಹಾಗೇ ಕೂಸಪ್ಪ ಕೊಟ್ಟ ಕಾಶಿಗೆ, ಖರ್ಚಿಗೆ ನಾಲ್ಕು ಬೆನ್ನುಕಡುಬು. ತಲೆ ಕೊಡವಿ, ಬೆನ್ನು ಬಿಲ್ಲುಮಾಡಿ, ಬಾಲದಲ್ಲಿ ಅಪ್ಪಳಿಸಿ, ಕಟಕಟ ಲಗಾಮು ಕಡಿದು ಎಡಕ್ಕೆ ಬಲಕ್ಕೆ ಮುಸುಡಿ ಬೀಸಿ ತನ್ನ ಸಿಟ್ಟೆಲ್ಲ ತೋರಿಸಿತು ಕಾಶಿ. ಕೂಸಪ್ಪ ಅದರ ದವಡೆಗೂ, ಬಾಲಕ್ಕೂ, ಕಾಲಿಗೂ ಸಿಗದೆ 'ನೆಗದಾಡಿ

ಮಾಲೀಸು ಮಾಡುತ್ತಿದ್ದ. ನಾನು ಹೋಗಿ ನೋಡಿ ಹೇಳಿದೆ—"ಕೂಸಪ್ಪ, ಇದೇಕೋ ಈ ದಿನ ಕಾಶೀಗೆ ಸಿಟ್ಟೋ ಏನೋ ಬಂದಿದೆ, ಮೊದಲು ಹುರುಳಿ ತಿನ್ನಿಸಿಬಿಡು, ಅನಂತರ, ನೀನು ಅದರ ಮೈ ಬಾಚೂವಂತೆ!" ಅದಕ್ಕೆ ಕೂಸಪ್ಪ ನೆಟ್ಟಗೆ ನಿಂತು ಸಲಾಮುಮಾಡಿ ಹೇಳಿದ—"ಇದು ಮಿಲಿಟರೀ ಗೋಡಾ. ಮರೆತ್ಹೈತೆ ಸಿಸ್ತೆಲ್ಲ. ಕಂತ್ರಿ ಆಗಿದೆ! ನಾನೇನು ಬಿಡೋನಲ್ಲ ಬುಡಿ, ಕಲಿಸೇಬಿಡುತ್ತೇನೆ ನೋಡಿ ಸಿಸ್ತು!" ಹೀಗೆಂದವನು. ಮಾಲೀಷಿ ಗಾರಂಭಿಸಿದ. ಕಾಶಿ ಹಾಗಿದ್ದರೆ ಈ ದಿನ ಬುದ್ಧಿಕಲಿತೀತೇನೋ ಎಂದು ಕೊಂಡು ಒಳಗೆಹೊದೆ. ನಮ್ಮ ತಾಯಿ—ಈರುಳ್ಳಿ ಬೆಲ್ಲ ಜಜ್ಜಿ ಕೊಡಪ್ಪ ಕೊಡಪ್ಪ, ಕುದುರೇ ಮಾಲಕುಮಿಗೆ. ಹೊತ್ತಾದರೆ ಇನ್ನೇನು ಮಾಡಿ ಯಾಳೋ ಕಾಣೆ. ಅವನೂ ಹೊಸಬಕಣಪ್ಪ, ಕೂಸಪ್ಪ. ಹೀಗೆಂದರು. ನಾನು ಉತ್ತರ ಜೋಡಿಸಿ ಹೇಳುವುದರಲ್ಲಿದ್ದ. ಅಷ್ಟರಲ್ಲೇ ಕುದುರೆಯು —"ಹೀ ಇ ಇ ಈ!" ಎಂದು ಸದ್ದೂ ಮತ್ತೆ ಪುನಹಾ—"ಅಯ್ಯೋ, ಅಂಭಾ ಆ ಆ ಆ!" ಎಂದ ಕೂಸಪ್ಪನ ಆರ್ತನಾದವೂ ಕೇಳಿಬಂದವು. "ಹೋಗಪ್ಪಾ, ಕೂಸಪ್ಪ ಹೋದನೋ ಏನೋ ಸತ್ತು! ಅದೇನು ರಣಗುದರೆ ಆಹುತೀ ತಗೊಂಡು ಬಿಡುತ್ತೆ, ಎರಡು ದಿನ ಸವಾರೀ ಇಲ್ಲದಿ ದ್ದರೆ—"ಎಂಬ ಮಾತೆಲ್ಲ ನಮ್ಮಮ್ಮನ ಬಾಯಿಂದ ಹೊರಡುವಷ್ಟರಲ್ಲೇ ನಾನು ಹಾರಿಹೋದೆ.

ಅಲ್ಲೇನಾಗಿತ್ತೇ? ರಣನೋಟ! ಕುದುರೆ ಅಗಾಡಿಪಿಚಾಡಿ ಕಿತ್ತು ಕೊಂಡಿತ್ತು. ಕೂಸಪ್ಪನ ಗಡ್ಡವನ್ನೇ ಹಿಡಿದುಬಿಟ್ಟಿತ್ತು! ನಾನು ನೀರುಳ್ಳಿ ಬೆಲ್ಲವನ್ನು ಅದರ ಮುಂದೆ ಮುದ್ದೆಮಾಡಿ ಹಾಕಿದೆ. ಹುರುಳೀ ಚೀಲವನ್ನು ಗೂಟದಿಂದ ತೆಗೆದೆ, ಹಸುರು ಹುಲ್ಲಿನ ಚೀಲವನ್ನು ಅದರ ಕಡೆಗೆ ಉರುಳಿ ಸಿದೆ. ಅನಂತರ ಒಳಗೆ ಓಡಿಹೋಗಿ ಎಲ್ಲ ಹೇಳಿದೆ ನಮ್ಮ ತಾಯಿಗೆ.

ಕೂಸಪ್ಪ ಆಸ್ಪತ್ರೆಗೆಹೋಗಿ ವಾಸಿಮಾಡಿಕೊಂಡನಾದರೂ, ನಮ್ಮಲ್ಲಿಗೆ ಹಿಂತಿರುಗಲಿಲ್ಲ. ಅವನ ವಿಚಾರಕ್ಕೆ ಹಾಗಾದರೂ, ಈ ಕುದುರೆ ಕಾಶಿಯು ಖಾಸೀಮನ ಹಿಂದೆ ಮಾತ್ರ ನಾಯಿ ಮರಿಯಂತೆ ಹೋಗುತ್ತಿತ್ತು. ಅವನದಕ್ಕೆ ಸರ್ಕಸ್ ಕೆಲವೆಲ್ಲ ಕಲಿಸುವೆನೆಂದು ರೌಂಡ್ ಹೊಡೆ ಸುತ್ತಿದ್ದ. ಲಾರಿಯ ಮೇಲೆ ಹಾರಿಸುತ್ತಿದ್ದ. ಬೆಂಕಿ ಉಂಗುರದಲ್ಲಿ ಹಾರಿ

ಸಲೂ ಕಲಿಸಬೇಕೆಂದಿದ್ದ. ನಮ್ಮ ಅಗ್ರಜರು ಆ ಕುದುರೆಗೆ ನಿತ್ಯ ಒಂದೊಂದು ಸವಾರಿ ಹೊಡೆದು ಮೈನೊರೆ ಕಾರುವಂತೆಮಾಡಿ ತರುತ್ತಿದ್ದರು. ನಮ್ಮ ತಾಯಿ ನಡು ಹಗಲು ಅದಕ್ಕೆ ಏನಾದರೂ ತುಳಸೀಪ್ರಸಾದ ತಿನ್ನಿಸಿಯೇ ಊಟಮಾಡುತ್ತಿದ್ದರು. ಸಂಜೆ ಕುದುರೆಯಿದ್ದಲ್ಲಿ ಭೂತ ಪ್ರೇತಗಳ ಕಾಟವಿಲ್ಲವೆಂದು ದೀಪ ಧೂಪ ಹಚ್ಚುತ್ತಿದ್ದರು. ಕಾಶಿಯ ಕಾಲು, ಒಳ್ಳೆಯದೆಂದು ಅವರ ಭಾವನೆ. ನಮ್ಮಣ್ಣನವರು ಅದು ಮನೆಗೆ ಬಂದಮೇಲೆ ಬಡ್ತಿ ಪಡೆದು ಎರಡು ತೊಟ್ಟಿಲು ತೂಗಿದ್ದರು.

ಹೀಗಿರುವಾಗ ಒಂದುಸಾರಿ ನವರಾತ್ರಿ ಬಂದಿತು. ಕುದುರೆಗೆ ಪೂಜೆ, ಪುರಸ್ಕಾರ, ಪ್ರಸಾದಗಳಾದವು. ಒಂದು ದಿನ ಪೀತಾಂಬರದ ಅಲಂಕಾರದಲ್ಲಿ ಕಾಶಿಗೆ ಮೆರವಣಿಗೆಯೂ ಆಯಿತು. ಈ ಗದ್ದಲದಲ್ಲಿ ಎಂಟು ದಿನಗಳ ವರೆಗೂ ಕಾಶಿಗೆ ಬೆಳಗಿನ ಸವಾರಿ ಇಲ್ಲವಾಯಿತು.

ಕುದುರೆಯಿಟ್ಟ ಸರ್ಕಾರಿ ನೌಕರರೆಲ್ಲ ಅವರವರ ಕುದುರೆಗಳನ್ನು ತಂದು ಓಡಿಸಬೇಕೆಂದೂ, ಗೆದ್ದ ಕುದುರೆಗೆ ಇನಾಮುಕೊಡುವರೆಂದೂ ಅಪ್ಪಣೆ ಬಂದುದರಿಂದ ನಮ್ಮ ಕುದುರೆಗೆ ಓಟದ ಅಭ್ಯಾಸಮಾಡಿಸಬೇಕಾಯಿತು. ಅಣ್ಣನವರು ಬೇರೆ ಯಾವುದೋ ಕೆಲಸದಲ್ಲಿದ್ದರು. ಖಾಸೀಂ ಸಾಹೇಬನೇ ಆ ಕೆಲಸಕ್ಕೆ ಒಪ್ಪಿದನು.

ಶನಿವಾರ ಸವಾರಿ ಹೊರಡಲನುವಾದ ನಮ್ಮ ಖಾಸೀಂ. ಆದರೆ ನಡುದಿನವಾದರೂ ಲಗಾಮು ಜೀನುಹಾಕಲಿಲ್ಲ. ಸುಮ್ಮನೆ ಓಡಾಡಿಕೊಂಡು ರಸ್ತೆಯಲ್ಲಿ ಏನೇನೊ ಗುರುತುಹಾಕಿಕೊಂಡು ಕಾಲಕಳೆಯುತ್ತಿದ್ದ. ನಾನೆಂದೆ"—ಏನ್ರಿ ಸಾಹೇಬರೆ ಈ ದಿನ ಬಹಳ ಸಂಚರಿಸುತ್ತಿದ್ದೀರಲ್ಲ. ಜಗುಲಿಯ ಮೇಲೆ ಅದೇನೇನೋ ಇದೆಯಲ್ಲ? ಅಮ್ಮಾವರಿಗೆ ಸರ್ಕಸ್ ಚಮತ್ಕಾರವೇನಾದರೂ ತೋರಿಸುತ್ತೀರೋ? ಈ ದಿನದ ಸವಾರೀಗೆ ಇನ್ನೂ ಏನೇನೂ ಏರ್ಪಾಡಾಗಿಲ್ಲವಲ್ಲ!" ಖಾಸೀಂ ಏನೂ ಮಾತಾಡದೆ ನಗುತ್ತ ಹಿಂದಿನ ಮನೆಗೆ ಹೋಗಿ ಕಾಶಿಯನ್ನು ಕರೆತಂದ. ಆ ದಿನ ಮನೆಯಲ್ಲಿ ಕರಿಗಡಬು ಕರಿದಿದ್ದರು. ಮನೆಯೆಲ್ಲ ಅದೇ ವಾಸನೆ. ಕಾಶಿಗೆ ಆ ದಿನ ಪ್ರಸಾದ ಸಿಕ್ಕಿತ್ತೊ ಇಲ್ಲವೋ ಕಾಣೆ. ಅದು ಕೊಸರಿಕೊಂಡು ಒಳಮನೆಕಡೆಗೆ ನುಗ್ಗಿತು. ಖಾಸೀಂ ಕೈಬಿಟ್ಟು ಆ ಕಡೆ ಬಾಗಿಲಿಗೆ ಬಂದು

ನಿಂತು ನಮ್ಮ ತಾಯಿಯವರಾಗಲೀ, ಅತ್ತಿಗೆಯವರಾಗಲೀ ಅಡಿಗೆಮನೆ ಬಾಗಿಲುತೆಗೆದು ಕಾಶಿಗೆ ತಿಂಡಿಕೊಡಲಿಲ್ಲ. ಕಾಶಿ ಅಲ್ಲಿ ಇಲ್ಲಿ ಮೂಸಿ ನೋಡಿ ಗೊರಸಿನ ಪಟ್ಟಪಟ್ಟ ಶಬ್ದಮಾಡಿ ಹೊರಬಾಗಿಲಿಗೆ ಬಂತು. ಖಾಸೀಂ ಅದನ್ನು ಹಿಡಿದುಕೊಂಡು ಮೆಟ್ಟಿಲು ಇಳಿಸಿದ. ಬೆನ್ನುಮೇಲೇರಿದ. ಕಾಶಿ ನಡುಗೆ ಹೊರಟಿತು. ಹಿಂತಿರುಗಿ ಬರುವಾಗ ಕುಕ್ಕುಲೋಟದಲ್ಲಿ ಬಂತು. ಮತ್ತೊಮ್ಮೆ ನಾಗಾಲೋಟದಲ್ಲಿ ಹೊರಟಿತು. ಅಗ್ರಹಾರದ ತುದಿಗೆ ಹೊರಟುಬಿಟ್ಟಿದ್ದ ಖಾಸೀಂ. ನಮ್ಮಮ್ಮ ಕರಿಗಡಬು ಕೊಡೋಣ ವೆಂದು ಹೊರಕ್ಕೆ ಬಂದರು. "ಕರಿಗಡಬು ಆಮೇಲೇನೋ. ಅದೇ ಸರಿ! ಓಟ ಮೊದಲು, ಊಟ ಆಮೇಲೆ. ಕರಿಗಡುಬು ಒಳಗಿಡಮ್ಮ. ಕಾಶಿ ಒಂದು ಸುತ್ತುಬರಲಿ. ಅದೇನೋ ಹೊಸಮಾದರಿ ಓಟ ಕಲಿಸ್ತಿದಾನಂತೆ, ನೋಡೋಣ" ಎಂದೆ.

ಕುದುರೆ ಭರಾಟೆಯಿಂದ ಭರ್ರೆಂದು ಹೊರಟಿತ್ತು. ಅಮ್ಮ ಅತ್ತಿಗೆ ಜಗುಲಿಯಲ್ಲಿ ನೋಡುತ್ತಿದ್ದರು. ಕೇರಿಯ ಜನರೆಲ್ಲ ಹೊರಬಂದು ನೋಡುತ್ತ ನಿಂತರು. ಕುದುರೆ ಹೋಗಿ ಹಿಂತಿರುಗಿ ಬಂತು. "ಏಕ್, ದೋ, ಲಾಫ್" ಎಂದು ಖಾಸೀಂ ಕೂಗಿದುದು ಮಾತ್ರ ಕೇಳಿತು. ಆಗಾ ಗಲೇ ಕುದುರೆ ಎದುರುಮನೆ ಮಕ್ಕದಲ್ಲಿದ್ದ ತಂತಿ ಕಂಭಕ್ಕೆ ಕಟ್ಟಿದ್ದ ಗಳು ವನ್ನು ಹಾರಿ ದಾಟಿಹೋಗಿತ್ತು. "ಅಚ್ಛಾ, ಬೀಬೀ!" ಎಂದು ಖಾಸೀಂ ಮತ್ತೆ ಕೂಗಿದನು. ಮತ್ತೊಮ್ಮೆ ನಾಗಾಲೋಟದಿಂದ ಬರುವಾಗ ಮನೆಯ ಬಳಿ—"ಫ಼ಏಕ್, ದೊ, ಲಾಫ್!" ಎಂದಹಾಗೆ ಕೇಳಿಸಿತು. ಆದರೆ ಕುದುರೆ ಕಾಶಿಯು ತಟಕ್ಕನೆ ನಿಂತುಬಿಟ್ಟು ನಾಲ್ಕು ಹೆಜ್ಜೆ ಮುಂದೆಹೋಗಿ ಹಿಂದಕ್ಕೆ ಬಂದು ಜಗುಲಿಯಮೇಲೆ ತಟ್ಟೆಯಲ್ಲಿಟ್ಟಿದ್ದ ಕರಿಗಡುಬುಗಳನ್ನು ತಿನ್ನುತ್ತ ನಿಂತುಬಿಟ್ಟಿತು.

ಈ ವೇಳೆಗೆ ರಸ್ತೆಯಲ್ಲಿ ಓಡಾಟವೆಲ್ಲ ನಿಂತು, ಎಲ್ಲೆಲ್ಲಿಯವರೆಲ್ಲ ಅಲ್ಲಲ್ಲೆ ನಿಂತು ಜಗುಲಿಗಳಲ್ಲಿ ಗುಂಪು ಒತ್ತರಿಸಿತ್ತು. ಕಾಶಿಯಿತ್ತು, ಆದರೆ ಖಾಸೀಂ ಖಾಸ್ತಾರನೇ ಇಲ್ಲ. ಏನಾದ ಅವನು? ಕುದುರೆಯ ಮೇಲೆ ಇದ್ದಹಾಗೇ ಇತ್ತಲ್ಲ. ರಸ್ತೆಯ ಆ ಕಡೆ ಈ ಕಡೆಯೆಲ್ಲ ನೋಡಿದರು ಜನ. ನಾನು ಕೂಗಿಯೇ ಕೂಗಿದೆ—ಉತ್ತರವಿಲ್ಲ. ಕುದುರೆ ಕಾಶಿಯ ಓಟದ

ಆರ್ಭಟದಲ್ಲಿ ನಮಗೇನೇನೂ ತೋಚಿರಲಿಲ್ಲ. ಅಷ್ಟು ಹೊತ್ತಿಗೇ ಅದೆಲ್ಲಿತ್ತೊ ಮೋಡ, ಮಳೆಬರಲಾರಂಭಿಸಿತು. ಕಾಶಿ ನೆನೆದು ಮೈಕೊಡವಿಕೊಂಡು ಕೂಗುಹಾಕಿತ್ತು. ಆಗ ಯಾರೋ ನರಳಿದಂತೆ ಕೇಳಿಸಿತು. ನಾನು ಜಗುಲಿ ಇಳಿದುಹೋಗಿ ಸ್ವಲ್ಪ ದೂರದಲ್ಲಿದ್ದ ಕಸದ ಡಬ್ಬದಲ್ಲಿ ನೋಡಿದೆ—ಮುದುರಿಕೊಂಡು ಮುದ್ದೆಯಾಗಿ ಬಿದ್ದಿದ್ದ ಖಾಸೀಂ. ಮುಕ ಕೆಳಗಾಗಿತ್ತು. ತೊಟ್ಟಿಯನ್ನು ಉರುಡಿಸಿದೆ. ಬಾಳೆ ಎಲೆ, ಮುತ್ತುಗದ ಎಲೆ, ಕಾಗದ, ಪರಕೆಗಳ ಸಂಗಡ ಈಚೆಗೆ ಬಂದ ಉರುಡಿಕೊಂಡು ಕುದುರೆ ಸವಾರ. ಅವನೊಂದು ಸಾರಿ ನರಳಿ ನಿಟ್ಟುಸಿರುಬಿಟ್ಟ. ಕೂಡಲೆ ಕಾಶಿಯು ಏನೂ ಅರಿಯದವಳಂತೆ ಹತ್ತಿರಬಂದು ಹಸೀ ಎಲೆಯೊಂದು ವಸಡಿನಲ್ಲಿ ಕಚ್ಚಿ ಹಿಡಿದು ಕೊಡವುತ್ತ ನಿಂತು ಕಾಲು ಕೆರೆಯಲಾರಂಭಿಸಿತು.

ಅದರರ್ಥವೇನೋ ನಾಕಾಣೆ. ಖಾಸೀಮನಿಗೆ ಅರ್ಥವಾಗಿರಬೇಕು. ಅವನೋ ಹಾಗೆ ಹೀಗೆ ಮೈಕೈ ನೀವಿಕೊಂಡ. ನಾನೊಂದಿಷ್ಟು ಮೈಕೈ ವರಸಿ ಉಜ್ಜಿ—“ಏಳು ಒಂದಿಷ್ಟು ನೀರಾದರೂ ಹೊಯ್ದುಕೊ ಸಾಕು ಈ ಸರ್ಕಸ್” ಎಂದೆ. ನಮ್ಮ ತಾಯಿ—“ಅಯ್ಯೋ ಪಾಪ ಒಂದಿಷ್ಟು ಬಿಸಿನೀರಿದೆ ತಪ್ಪಲೆಯಲ್ಲಿ ಮೈಮೇಲೆ ಸುರಿದಾದರೂ ಸುರಿ ! ಏನು ಹಾಳು ಕುದುರೆಯೋ !” ಎಂದರು. “ಈ ದಿನ ಯಾರ ಮೋರೆಯೋ ನೋಡಿದ್ದೆ. ಹಾಳು ಮೋರೆ ; ಅದಕ್ಕೇ ಹೀಗಾಗಿದೆ. ಏಳಪ್ಪ ಏಳು !” ಹೀಗೆಂದು ಎಬ್ಬಿಸಿದೆ.

ಖಾಸೀಂ ಎದ್ದುನಿಂತಾಗ ನಮಗೆಲ್ಲ ಬಹಳ ಆನಂದ. ಎಲ್ಲೆಲ್ಲೂ ಗಾಯವಾದಂತಿರಲಿಲ್ಲ. ಅವನು ಹಿಂದುಗಡೆ ಮನೆಗೆ ಹೋದನೆಂದು ನಾನು ಕುದುರೆಲಗಾಮು ಸರಿಮಾಡಿ ಕೊಟ್ಟಿಗೆಗೆ ಕಳಿಸಿಬಿಡೋಣವೆಂದುಕೊಂಡೆ. ಆದರೆ ಅದಕ್ಕೆ ಮುಂಚೆ ಲಗಾಮುಹಿಡಿದು ಅದರ ಕಪಾಲಕ್ಕೆರಡೆರಡು ಏಟು ಕೊಡುತ್ತ ಬುದ್ಧಿಹೇಳುವ ಸಡಗರದಲ್ಲಿದ್ದೆ. ಅಷ್ಟುಹೊತ್ತಿಗೆ ಖಾಸೀಂ ಬಂದ. ಎರಡೇ ನಿಮಿಷಗಳಲ್ಲಿ ಜೀನುಹಾಕಿ ಹೊಟ್ಟೆಗೆ ಪಟ್ಟೆಬಿಗಿದ, ರಿಕಾಪು ಸರಿಮಾಡಿಕೊಂಡ. ಬರೀ ಕಾಲಿಗೇ ಹಿಮ್ಮಡಿಮುಳ್ಳು ಬಿಗಿದುಕೊಂಡ. ಬಾರುಕೋಲು ತೆಗೆದುಕೊಂಡ. ಕುದುರೆಯ ಮೇಲೆ ಹಾರಿಕೊಂಡ. ಅವನು ಕಾಶಿಯ ಮೇಲೆ ಕೂತಾಗ, ಹಣೆಗೆ ಬಟ್ಟೆಕಟ್ಟಿದ್ದು ಕಂಡೆ, ಅವ

ರಕ್ತದಿಂದ ಹಣೆಯು ಬಳಿ ನೆನೆದುದನ್ನು ಕಂಡೆ. ಆದರೆ ಆಗ ಅವನನ್ನು ತಡೆಯುವುದು ನನ್ನಿಂದ ಸಾಧ್ಯವಾಗಲಿಲ್ಲ. ನಾನು ಪ್ರಯತ್ನಪಡಲೂ ಇಲ್ಲ. ಖಾಸೀಂ ಹೊರಟೇಹೋದ ಹಲ್ಲುಮುಡಿ ಕಚ್ಚಿಕೊಂಡು ಕುದುರೆ ನಾಗಾಲೋಟದಲ್ಲಿ ದೌಡು ಹೊಡೆಯಿತು. ಆ ರಸ್ತೆಯನ್ನೇ ಬಿಟ್ಟು ಹೊರಟ. ಹಿಂತಿರುಗಲಿಲ್ಲ.

ಅತ್ತಿಗೆಯವರು—"ಅವರೇ ಸರಿ, ಅದನ್ನು ಮೆತ್ತಗೆ ಮಾಡುವುದಕ್ಕೆ. ಇವನು ಏಕೆ ಹೀಗೇ ವಿಷಪರೀಕ್ಷೆಮಾಡುತ್ತಾನೋ!" ಎಂದು ಒಳಗೆ ಹೊದರು. ನಾನು ಜಗುಲಿಯಮೇಲೇ ನಮ್ಮ ತಾಯಿಯವರ ಸಂಗಡ ಮಾತಾಡುತ್ತಾ ಕುಳಿತುಬಿಟ್ಟೆ. ಏನುಮಾಡುವುದಕ್ಕೂ ತೋಚಲಿಲ್ಲ.

ಅರ್ಧಗಂಟೆಯಾದ ಮೇಲೆ ನಮ್ಮ ಅಣ್ಣಂದಿರು ಕಾಶಿಯ ಕತೆ ಕೇಳಿ ವ್ಯಥೆಪಟ್ಟು—"ಏನೋ ಕೆಟ್ಟಚಾಳಿ ಕಲಿತುಬಿಟ್ಟಿದೆ. ಯಾರ ಪ್ರಾಣಕ್ಕೆ ಸಂಚಕಾರವೋ ಕಾಣೆ!" ಎಂದು ಆಫೀಸು ಕೋಣೆಗೆ ಹೋದರು. "ಏನು ಬಂತಮ್ಮ ಲಕ್ಷ್ಮಿಯ ಹಾಗೆ ಇದ್ದ ಕುದುರೆಗೆ ಈ ದಿನ ಖಾಸೀಮುಸಿಗೆ ಹೋದ ಜೀವ! ಅದೇನೋ ಎಂತೋ ಬದುಕಿಕೊಂಡ!" ಎಂದು ಜಗುಲಿಯ ಬಳಿಗೆ ಮತ್ತೆ ಹೋದರು.

—"ಯಾರ ಸುದ್ದಿಯೂ ಇಲ್ಲ. ಖಾಸೀಮನಾಗಲೀ ಕುದುರೆಯಾಗಲೀ ಯಾರ ಸುದ್ದಿಯೂ ಇಲ್ಲ"—ಎಂದು ಒಳಗೆ ಬಂದು ಉದ್ದಿನ ಬೇಳೆ ಆರಿಸಲಾರಂಭಿಸಿದರು.

ನಮ್ಮ ಅಣ್ಣ ಎಂದರು ಸುಮಾರು ನಾಲ್ಕು ಘಂಟೆ ಸಮಯದಲ್ಲಿ—"ಕುದುರೆ ವಾಸನೆ ಬರುತ್ತೆ. ಕಾಶಿ ಬಂತೇನೋ ನೋಡೇ!" ಎಂದರು. ನಮ್ಮತ್ತಿಗೆಯವರು ಜಗುಲಿಗೆ ಹೋದರು. ಯಾವ ಸುದ್ದಿಯೂ ಇಲ್ಲವೆಂದು ಹಿಂತಿರುಗಿದರು. ಆದರೆ ಆ ದಿನ ನನಗೇಕೋ ಗಡಿಯಾರ ನೋಡುವಂತೇ ಆಗುತ್ತಿತ್ತು. ನಿಮಿಷಗಳನ್ನೇ ಎಣಿಸುತ್ತಿದ್ದೆ. ನಮ್ಮ ತಾಯಿಯವರು ಕೂಗಿದರು—ಲೋ ಯಾರ್‍ರಪ್ಪ, ಒಲೆ ಬಿಡುವಾಗಿದೆ ಹುರುಳಿ ತಂದುಕೊಡಿ, ಕಾಶೀಗೆ ಬೇಯಿಸಬೇಡವೆ ಹುರುಳಿ!"

—"ಕಾಶೀ, ಕಾಶಿಯೆಲ್ಲಿದೆ ಕಾಶೀ!"—ಎಂದೆ. ಕೂಡಲೆ ಕಾಶಿ—"ಊ ಹು ಹು ಹೂ!" ಎಂದ ಸದ್ದು ಕೇಳಿಸಿತು. ಹಿತ್ತಲು ಬಾಗಿಲಲ್ಲಿ

ಹೋಗಿ ನೋಡಿದರೆ ಕಾಶಿ, ಏನೂ ಅರಿಯದ ಹಸುಳೆಯಂತೆ ಒಳಗೆಬಂದು ಕೊಟಿಗೆಗೆ ಹೋಗಿ ನೀರು ಹೀರುತ್ತ ನಿಂತಿತ್ತು. ನಾನು ಕಟ್ಟಿಹಾಕುವ ಮುನ್ನ ಲಗಾಮು ತೆಗೆದು, ಜೀನುಬಿಚ್ಚಿಟ್ಟು ಒಳಗಬಂದು ಹೇಳಿದೆ. ಕೂಡಲೆ ನಮ್ಮಗ್ರಜರು ಜಗುಲಿಗೆ ಹೋಗಿ ಆ ಕಡೆ ಈ ಕಡೆ ನೋಡಿದರು, ಏನೇನೂ ಕಾಣಲಿಲ್ಲ. ಕೂಡಲೆ ಬೈಸಿಕಲ್ ಹತ್ತಿ ಎಲ್ಲಿಯೋ ಹೋದರು. ಇತ್ತಕಡೆಯಿಂದ ಸ್ವಲ್ಪ ಸಮಯದಲ್ಲೇ ಒಂದು ಗಾಡಿಬಂತು. ಅದರೊಳಗೆ ಖಾಸೀಂ ಮಲಗಿದ್ದನು. ಗಾಡಿಯಾತನು ಅವನನ್ನು ಇಳಿಸುವುದರಲ್ಲಿದ್ದನು. ಆದರೆ ನಾನು ಮೆಟ್ಟಿಲಿಳಿದು ಹೋಗಿ ನೋಡಿದೆ. ಖಾಸೀಂ ಎಚ್ಚರಿಲ್ಲದೆ ಮಲಗಿದ್ದ. ತಲೆಯೊಡೆದುಹೋಗಿತ್ತು. ಕೈಗಳಿಗೆ ಏಟು ಬಿದ್ದಿತ್ತು. ಹಿಮ್ಮಡಿ ಮುಳ್ಳು ತೊಡೆಗೆ ಚುಚ್ಚಿ ಶರಾಯಿಲ್ಲ ಹರಿದೇ ಹೋಗಿತ್ತು. ನಮ್ಮತ್ತಿಗೆ ಮತ್ತು ತಾಯಿಯವರಿಗೆ ಹೇಳಿ ಅದೇ ಗಾಡಿಯಲ್ಲಿ ಖಾಸೀಂನನ್ನು ಆಸ್ಪತ್ರೆಗೆ ಸಾಗಿಸಿದೆ. ಅಲ್ಲಿಗೆ ನಾನು ತಲುಪುದರಲ್ಲೇ ನಮ್ಮಣ್ಣಂದಿರು ಬೈಸಿಕಲ್ಲಲ್ಲಿ ಬಂದು ಕಾದಿದ್ದರು. ಕುದುರೆ ನೋಡಿಕೋ ಹೋಗೆಂದು ನನ್ನ ಕಳುಹಿಸಿದರು. ನಾನು ಮನೆಗೆ ಬಂದು ವಿವರಗಳೆಲ್ಲ ವರದಿಮಾಡಿ, ಕುದುರೆ ನೋಡಹೋದೆ. ಕುದುರೆಗೇನೂ ಆಗಿರಲಿಲ್ಲ.

ರಾತ್ರಿ ಬಹಳ ಹೊತ್ತಿನ ಮೇಲೆ ಅಣ್ಣಂದಿರು ಮನೆಗೆ ಬಂದರು. ನಮ್ಮ ತಾಯಿ ಕರೆದು ಹೀಗೆಂದರು. 'ಕಾಶಿ ನಮ್ಮನೆಗೆ ಬಂದು ಏಳು ವರ್ಷವಾಯಿತಲ್ಲವೆ! ಸರಿ ಅದರ ಋಣಾನುಬಂಧ ತೀರಿತೇನೋ! ನನ್ನ ಯತ್ನ ಏನು ನಡೆಯುತ್ತೆ!'

ನಮ್ಮ ತಾಯಿ—"ಅದೇಕೋ ಹೀಗಾಡುತ್ತಿ?" ಅಣ್ಣನವರು—"ಇಂಥಾ ಕೆಟ್ಟ ಚಾಳಿಯ ಕುದುರೆ ನಮ್ಮಲ್ಲಿಗೆ ಯೋಗ್ಯವಲ್ಲ ಬಿಡು!"

ತಾಯಿ—"ಅದುದಾದರೂ ಏನಪ್ಪ? ಸವಾರಿ ಮಾಡಲೇಬರದಿದ್ದ ಹಠಗಾರ ಆ ಮುಸಲ್ಮಾನನ ಕೈಲಿ ಹಾಗೆ ಮಾಡಿತು. ನಿಂಗೇನಾದರೂ ಮಾಡಿತೇನಪ್ಪ. ಅವನಿನ್ನು ಹತ್ತುವುದೇ ಬೇಡ!" ಅಣ್ಣ—"ಹಾಗಲಮ್ಮ! ಯಾರಿಗಾದರೇನು? ಎಲ್ಲರಿಗೂ ಹಾಗೇ ಅದು! ಅದು ಬಲು ಕೆಟ್ಟ ಚಾಳಿ. ಜೋರಾಗಿ ಓಡುತ್ತ ಇದ್ದು, ಇದ್ದಕ್ಕಿದ್ದ ಹಾಗೇ ನಿಂತರೆ ಯಾರುತಾನೆ ಬೆನ್ನಮೇಲೆರಬಲ್ಲರು?" ತಾಯಿ—"ಹಾಗಾದರೇನು ಮಾಡುತ್ತೀ!"

ಅಣ್ಣ—"ಮಿಲಿಟರಿಯಲ್ಲಿ ಡೂಂಮ್ಸ್ ಡೇ ಮಾಡುತ್ತಾರಂತೆ ಮುಂದಿನ ಶುಕ್ರವಾರ. ಅಲ್ಲಿಗೆ ಕಳಿಸಿಬಿಡುತ್ತೇನೆ."

ತಾಯಿ—"ಅವರೇನು ಕೊಡುತ್ತಾರೆ?"

ಅಣ್ಣ—"ಅವರೇನೂ ಕೊಡುವುದಿಲ್ಲ! ನಾವೇ ಐದು ರೂಪಾಯಿ ಕೊಡಬೇಕು! ನಮ್ಮ ಕುದುರೆ ಫೋಟೋ ಬೇಕಾದರೆ."

ತಾಯಿ—"ಹಾಗೆಂದರೇನಪ್ಪ. ಕುದುರೆ ಫೋಟೋ ಯಾತಕ್ಕೆ. ಕುದುರೆಯೇ ಇರುತಲ್ಲ."

ಅಣ್ಣ—"ಕುದುರೆ ಇರುವುದಿಲ್ಲ. ಅದಕ್ಕಾಗಲೇ ಹದಿನೈದು ವಯಸ್ಸೂ ಆಗಿದ್ದೆ. ಮುಕ್ಕಾಲು ಆಯಸ್ಸೇ ಕಳೆದಿದೆ. ಅದಕ್ಕೇ ಅದನ್ನು ಡೂಂಸ್ ಡೇಗೆ ಕಳಿಸಿಬಿಡೋಣ!"

ತಾಯಿ—"ಅದೇನೋ ಅರ್ಥವಾಗುವುದಿಲ್ಲಪ್ಪಾ ನಿನ್ನ ಮಾತು."

ಅಣ್ಣ—"ಇನ್ನು ಯಾರೂ ಸವಾರಿಮಾಡುವಂತಿಲ್ಲ ಅದರ ಮೇಲೆ. ಅದನ್ನು ಕಳಿಸಿಬಿಡುವುದೇ ಲೇಸು. ಅದು ಇದ್ದರೆ ನಾವು ಇರುವಂತಿಲ್ಲ."

ತಾಯಿ—"ಇಷ್ಟು ದೊಡ್ಡ ಮನೆಯಲ್ಲಿ, ಇಷ್ಟೆಲ್ಲ ಸಂಪಾದನೆಯಲ್ಲಿ ಅದಕ್ಕೆ ಜಾಗವಿಲ್ಲವೆ? ಅದರ ಪಾಡಿಗೆ ಅದಿರಲಿ."

ಅಣ್ಣ—"ನಿನಗೆ ತಿಳಿಯದಮ್ಮಾ ಅದನ್ನು ಷೂಟ್‌ಮಾಡಿಸಿದರೇ ಕ್ಷೇಮ ಬೇಕಾದರೆ ಅದರ ಫೋಟೋ ಇಟ್ಟುಕೊಂಡಿರು ಮನೆಯಲ್ಲಿ, ನಿನ್ನ ಪೂಜೆ ಪುರಸ್ಕಾರಕ್ಕೆ."

ನಮ್ಮ ತಾಯಿಯವರಿಗೆ ಅದೇನೂ ಅರ್ಥವಾಗದೆ ತಮ್ಮ ಹತ್ತಿಬುಟ್ಟಿ ಎತ್ತಿಕೊಂಡು ಈಚೆಗೆ ಬಂದು ನನ್ನ ಕೇಳಿದರು. ನನಗೆ ಬಹಳ ಸಂಕಟ ವಾಗಿತ್ತು. ಏನೂ ಹೇಳದೆ ಕಣ್ಣೊರಸಿಕೊಂಡು, ಹಿತ್ತಲಿಗೆ ಹೋಗಿ ಕಾಶಿಯ ಬಳಿ ನಿಂತೆ. ಅದೇಕೋ ಅದರ ಕಣ್ಣಲ್ಲಿ ನೀರಿಳಿಯುತ್ತಿತ್ತು. ನನ್ನ ಮೂಸಿನೋಡಿ ಆಕಡೆ ತಿರುಗಿಕೊಂಡಿತು. ಹುಲ್ಲು ತಿನ್ನಲಿಲ್ಲ. ಬೆಲ್ಲ ತೋರಿಸಿದರೂ ಮಿಸುಕಾಡಲಿಲ್ಲ. ಹತ್ತಿರಹೋಗಿ ಮೈ ತಡವರಿಸಿದೆ. ಬೆನ್ನು ತಟ್ಟಿದೆ ಕೈಕಾಲು ತಿಕ್ಕಿದೆ. ಅದರ ತಲೆಯನ್ನು ತಬ್ಬಿಕೊಂಡೆ ನನ ಗೇಕೋ ಬಹು ದುಃಖವಾಯಿತು. ಬಿಕ್ಕಿ ಬಿಕ್ಕಿ ಅತ್ತುಬಿಟ್ಟೆ.

ಆ ರಾತ್ರಿ ಊಟದ ಸಮಯದಲ್ಲಿ ನಮ್ಮ ತಾಯಿ ಮತ್ತೆ ಪ್ರಶ್ನೆಮಾಡಿದರು, ಸಾಮತಿ ಹೇಳಿದರು. ಅವರಿವರ ವಿಚಾರ ಸೂಚಿಸಿದರು. ಅಣ್ಣಂದಿರು ಅಸೆಂಬ್ಲಿ ಅಧ್ಯಕ್ಷರಂತೆ—"ಹಾ, ಹೂ, 'ನೋಡಲಾಗುತ್ತೆ, ವಿಚಾರಿಸಲಾಗುತ್ತೆ, ಆಹಾ, ಊಹೂ"—ಎಂತಲೇ ತಮ್ಮ ಅಮೂಲ್ಯ ಅಭಿಪ್ರಾಯಗಳನ್ನು ಸೂಚಿಸುತ್ತ ಊಟಮಾಡಿದರು. ಆದರೂ ನಮ್ಮಮ್ಮ ತೃಪ್ತಿಪಡದೆ ಇದ್ದರು. ಮಾರನೆ ಬೆಳಗ್ಗೆ ಆಸ್ಪತ್ರೆಯಲ್ಲಿದ್ದ ಖಾಸೀಂನಿಗೆ ಹೇಳಿಕಳುಹಿಸಿದರು. ಖಾಸೀಂ, ತಾನೆರಡೇ ದಿನ ಬಿಟ್ಟುಬರುವುದಾಗಿಯೂ, ಅದುವರೆಗೆ ಏನೂ ಮಾತಾಡಬಾರದಾಗಿಯೂ ಹೇಳಿಕಳುಹಿಸಿದನು. ಅಣ್ಣಂದಿರು ನಿಶ್ಚೈಸಿ ಬಿಟ್ಟಿದ್ದರು. ಕುದುರೆ ಹೋಗಲೇಬೇಕು. ಬದುಕಿದ್ದರೆ ಅದಕ್ಕೂ ಕಷ್ಟ ನಮಗೂ ಕಷ್ಟ. ನಿಮಗೆ ಲಕ್ಷ್ಮಿಯಂತಾದರೆ ಒಂದು ಬೆಳ್ಳಿ ಪ್ರತಿಮೆಮಾಡಿಸಿಕೊಳ್ಳಿ ಪೂಜೆಮಾಡುವುದಕ್ಕೆಂದು ಕಡೆಯ ಮಾತನ್ನೇ ಖಂಡಿತ ಹೇಳಿಬಿಟ್ಟರು. ಮರಣದಂಡನೆಗೆ ಗುರಿಯಾದವನ ಸಂಗಡ ವಾಸಮಾಡುವಂತೆ ನಾವೆಲ್ಲರೂ ಗಂಟೆಗಳನ್ನೆಣಿಸುತ್ತಾ ಕಾಲಕಳೆಯುತ್ತಿದ್ದೆವು.

ಖಾಸೀಂ ಬಂದ. ಅವನು ನೇರವಾಗಿ ಕುದುರೆಯ ಬಳಿಗೆ ಹೋದ, ಕುದುರೆ ಕಾಲುಕೆರೆದು ಕೂಗಿತು. ಖಾಸೀಂ ಹತ್ತಿರ ಹೋದಹೊರತು ಬಿಡದೆ ಕುಣಿದಾಡಿತು. ಅವನು ಹತ್ತಿರಹೋದ ಕೂಡಲೆ ಮೈಕೈಯೆಲ್ಲ ಮೂಸಿತು. ಮುತ್ತುಕೊಡುವ ಸಂಜ್ಞೆಮಾಡಿತು. ಖಾಸೀಂ ನಿಲ್ಲಲಾರದೆ ಕುಳಿತುಬಿಟ್ಟ. ಕುದುರೆ ಅವನ ಹೆಗಲಮೇಲೆ ಮುಸುಡಿ ಇಟ್ಟು ನಿಂತಿತು. ನಿಂತು ನಿಂತು ಸಾಕಾಗಿ ನಾನು ಒಳಕ್ಕೆ ಹೋದೆ. ನಮ್ಮಣ್ಣನವರು ಊಟಮಾಡಿದನಂತರ ಕುದುರೆ ಮನೆಗೆ ಹೋಗಿ ನೋಡಿದ್ದರು. ಕುದುರೆಯಾಗಲೀ ಖಾಸೀಮನಾಗಲೀ ಅವರತ್ತ ತಿರುಗಲಿಲ್ಲ. ಧನಿ ಕೊಡಲಿಲ್ಲ. ಅವರು ಸ್ವಲ್ಪ ನಿಂತು ಹಿಂತಿರುಗಿದರು.

ಇನ್ನು ಮೂರು ದಿನಕ್ಕೆ ಕುದುರೆಗೆ ಮರಣದಂಡನೆ, ಖಾಸೀಮನನ್ನು ಎತ್ತಿಹಾಕಿದ್ದಕ್ಕೆ ಮತ್ತು ಮುದಿಯಾದ ತಪ್ಪಿತಕ್ಕೆ. ಇನ್ನು ಐದು ದಿನಕ್ಕೆ ಕುದುರೆಜೂಜು, ನೌಕರ ಮಾನೇರ ಕುದುರೆಜೂಜು ಮುಂದುಹಾಕಲ್ಪಟ್ಟಿತ್ತು. ಆದರೆ ನಮ್ಮ ಕುದುರೆ ಆ ಜೂಜಿಗೆ ಹೋಗುವ ಅದೃಷ್ಟಪಡೆದಿರ

ಲಿಲ್ಲ. ಅಯ್ಯೋ! ಕುದುರೆಯೆ! ಎಂಥಾ ಹಣೆಬರಹ ನಿನ್ನದು! ಯಾಕಾದರೂ ನಮ್ಮ ಮನೆಗೆ ಬಂದು, ನಮ್ಮನ್ನೆಲ್ಲಾ ಇಷ್ಟು ಹಚ್ಚಿಕೊಂಡಿದ್ದು, ಈಗ ನಮ್ಮ ಕಣ್ಣೆದುರಲ್ಲೇ ಸತ್ತು ಪ್ರತಿಮೆಯಾಗುವೆಯಲ್ಲ!—ಹೀಗೆಂದು ಬಹಳ ಸಂಕಟಪಟ್ಟು ಕುಳಿತಿದ್ದೆ. ಮತ್ತೆದ್ದು ಹೋದೆ, ವಳಗೆ ನಮ್ಮತ್ತಿಗೆಯ ಬಳಿಗೆ. ಅವರು ದೇವರಮುಂದೆ ಚೀಟಿಹಾಕಿದ್ದರು. ನಾನೊಂದು ತೆಗೆದು ಓದಿ ಹೇಳಿದೆ. ಅದರಲ್ಲಿ "ಸಾವಿಲ್ಲ" ಎಂದು ಸೂಚನೆಬಂತು. ನಮ್ಮ ತಾಯಿ ಊರ ಜೋಯಿಸರಲ್ಲಿ ಹೋಗಿ ಕೇಳಿಕೊಂಡು ಬಂದಿದ್ದರು. ಕೆಂಪನೆಯ ಮನುಷ್ಯಬಂದರೆ ಭಯವಿಲ್ಲವೆಂದರಂತೆ. ಅಂತೂ ಕುದುರೆ ಜೀವಕ್ಕೂ ಸಾವಿಗೂ ನಡುವೆ ತೂಗಾಡುತ್ತಿತ್ತು. ನಮ್ಮಣ್ಣಂದಿರೇನೋ ನಿರ್ಧಾರಮಾಡಿದ್ದರು. ಅವರ ನಿರ್ಣಯಕ್ಕೆ ತಕ್ಕಂತೆ ಮಿಲಿಟರಿ ಆಫೀಸಿನಿಂದ ಪತ್ರ ಬಂದಿತು. ಇವರೂ ತಸಬೀರಿಗಾಗಿ ಐದು ರೂಪಾಯ ಕಳಿಸಿದ್ದರು. ಮತ್ತು ಕುದುರೆ ಪ್ರತಿಮೆಯೂ ಅಗಸಾಲಿಯ ಬಳಿ ಸಿದ್ಧವಾಗುತ್ತಲಿತ್ತು. ನಾಳೆ ಏನೋ, ಎಂತೋ, ಎಂದು ನಿರ್ಧಾರವಾಗಿರಲಿಲ್ಲ.

ಅರ್ಧ ರಾತ್ರಿ ಸಮಯದಲ್ಲಿ ಯಾರೋ ಕೂಗಿದಂತಾಯಿತು. ನಾನು ಮುಂಬಾಗಿಲು ನೋಡಿದೆ. ಯಾರೂ ಇರಲಿಲ್ಲ. ನಮ್ಮ ತಾಯಿ ಹಿಂದುಗಡೆ ಬಾಗಿಲಿಂದ ಹೋದರು. ಖಾಸೀಂ ದೀಪತರಹೇಳಿದ. ನಾನೂ ಸಂಗಡ ಹೋದೆ. ಕಾಸಿ ಕುದುರೆ ಮಲಗಿತ್ತು. ಖಾಸೀಂ ದೀಪದ ಬೆಳಕಲ್ಲಿ ಕುದುರೆ ಸುಳಿಗಳನ್ನೆಲ್ಲ ಪರೀಕ್ಷೆಮಾಡಿದ. ನಮ್ಮ ತಾಯಿ ಕೇಳಿದರು— "ಏನಪ್ಪಾ ಕಾಸೀಂ! ನೀನು ಕೆಂಪಗಿದ್ದೀ ಎಂದು ನಾನು ಕಂಡೇ ಇರಲಿಲ್ಲ. ನೋಡು ನಿನ್ನಿಂದಲೇ ಕುದುರೆ ಬದುಕಬೇಕೆಂತ ಕಾಣುತ್ತೆ. ಸುಳಿಗಳೆಲ್ಲ ಏನನ್ನುತ್ತವೆ ಹೇಳಿಬಿಡು. ನಿನ್ನಿಂದಲೇ ಬದುಕಬೇಕು. ಯಾಕೆಂದರೆ ನಿನಗೆ ಅಪರಾಧಮಾಡಿಯೇ ಅದು ಸಾಯುವಂಥ ಶಿಕ್ಷೆಪಡೆದಿದೆ!"

ಆಗ ಖಾಸೀಂ ಎದ್ದು ಕುದುರೆ ಸುತ್ತ ತಿರುಗಿಬಂದು ನಮ್ಮ ತಾಯಿಯವರಿಗೆ ಮುಖ್ಯ ಸುಳಿಗಳನ್ನೆಲ್ಲ ತೋರಿಸಿದ. ಆ ಸುಳಿಗಳ ಪ್ರಭಾವದಿಂದ ಆ ಕುದುರೆ ಆಗ ಸಾಯುವಂತಿರಲಿಲ್ಲ. ತನ್ನ ಯಜಮಾನನಿಗೆ ಒಳ್ಳೇ ಅಧಿಕಾರ ಕೊಡಿಸಿ, ಶಾಭಾಸ್‌ಗಿರಿ ದೊರಕಿಸಿ, ಒಂದು ಮರಿ ಪಡೆದುಕೊಂಡು ಸುಖವಾಗಿರುವಂತೆ ಸೂಚಿತವಾಯಿತು. ಈ ವಿವರಗಳಿಂದ ನನಗೂ ನಮ್ಮ

ತಾಯಿಯವರಿಗೂ ಧೈರ್ಯಬಂತು. ಖಾಸೀಂ ಕುದುರೆಯನ್ನೊರಗಿ ಕಂಬಳಿ ಎಳೆದುಕೊಂಡ. ಮೆತ್ತನೆ ಸೈಜು ಹುಲ್ಲಮೇಲೆ ಕುದುರೆಯಂಥ ಬೆಚ್ಚನೆ ಗೆಳೆಯನ ಸಂಗಡ ನಿದ್ದೆ ಮಾಡುವುದೊಂದು ಸೌಖ್ಯದ ಅನುಭವ. ಒಂದು ಭಾಗದಲ್ಲಿ ತೀವ್ರ ಯುದ್ಧದ ವಾತಾವರಣದ್ದೂ, ಇನ್ನೊಂದು ಕಡೆ ಶತಮಾನ ಗಳ ಹಿಂದಿನ ಸಂಚಾರಿ ಜನಾಂಗದ ಅನುಭವ. ಖಾಸೀಮನಿಗೆ ಎರಡೂ ಒಪ್ಪುತ್ತಿತ್ತು.

ಅಣ್ಣನವರು ಸ್ಥಿರಮಾಡಿದ್ದರು ಕುದುರೆಯನ್ನು ಗುಂಡಿನ ಬಾಯಿಗೆ ಕಳುಹಿಸುವುದಕ್ಕೆ. ನಾಳೆ ಕಳಿಸುವುದೆಂದಾಗ್ಗೆ, ಈ ದಿನ ಕುದುರೆ ಪ್ರತಿಮೆ, ಕುದುರೆಯ ಫೋಟೋ ಸಹ ಬಂದವು. ತುಂಬ ಹೂವು, ಹಣ್ಣು, ಓಲಗ ತರಿಸಿ, ಮೆರವಣಿಗೆಗೆ ಏರ್ಪಾಡು ಮಾಡಿದರು. ಅಣ್ಣಂದಿರಿಗೆ ಕುದುರೆ ಹಂಬಲ ಬಹಳವಾದರೂ ಹೊರಗೆ ತೋರಿಸುತ್ತಿರಲಿಲ್ಲ, ಬಹಳ ಬಿಗುಮಾನ. ಆದರೂ ಎದುರಿಗೆ ನಿಂತು ಅಲಂಕಾರಮಾಡಿಸಿದರು. ಹಿಂಗಾಲು ಮುಂಗಾಲು ಕಿವಿ ಬಾಲಗಳಿಗೆಲ್ಲ ಆಭರಣಗಳು, ಮೈಮೇಲೆ ಪೀತಾಂಬರ ಮತ್ತೆ ಬೆಳ್ಳಿತಟ್ಟೆಯಲ್ಲಿ ಕದಲಾರತಿ—ಹೀಗೇ ಏನೇನೆಲ್ಲ ವೈಭವ ನಡೆದ ಮೇಲೆ ಯಾರೋ ಕೇಳಿದರು. "ಇದೇನಿರೇ ಇದೆಲ್ಲ!" ನಮ್ಮಮ್ಮ ಹೇಳಿ ದರು "ಕಾಶಿ ಕನ್ಯೆಯಾಗಿದ್ದಾಳೆ, ಅವಳೀಗ ಮದುವೆಗೆ ಹೊರಟಿದ್ದಾಳೆ. ಅವಳು ವರನ್ನ ಹುಡುಕಿಕೊಂಡು ಹೋಗುವಳಮ್ಮಾ!" ಇನ್ನಾರೋ ಕೇಳಿ ದರು—"ಏನ್ರೀ ಸ್ವಾಮಿ! ಇದೇನೆಲ್ಲ ವೈಭವ?" ನಮ್ಮ ಅಣ್ಣ ಹೇಳಿ ದರು. "ನಮ್ಮ ಮಿಲಿಟರಿ ಕುದುರೆಗೆ ಇದು ಹುಟ್ಟಿದ ದಿನ. ಅದಕ್ಕೇ.... ....!" ಹೀಗೆಂದವರು ಒಳಗೆ ಹೋದರು. ಇನ್ನಾರೋ ಕೇಳಿದರು. "ಏನೋ ಸ್ವಾಮಿ ಯಾಕೆ ಇದೆಲ್ಲ?" ನಾನು "ಖಾಸೀಮನ್ನ ಬೀಳಿಸಿತ್ತಲ್ಲ, ಅದಕ್ಕೇ, ಈ ಮೆರವಣಿಗೆ ಇಲ್ಲಿ ನಾಳೆ ಅಲ್ಲಿ. ಕಾಶೀಗೆ, ಮಿಲಿಟರಿಯವರು........!" ಇಷ್ಟಕ್ಕಿಂತ ಹೆಚ್ಚು ಹೇಳಲಾರದೆಹೋದೆ. ಬಿಕ್ಕಿ ಬಿಕ್ಕಿ ಅಳಲಾರಂಭಿಸಿದೆ. ಅವರೇನೋ ತಿಳಿದುಕೊಂಡು ಹೋದರು. ಕುದುರೆ ಬಿಟ್ಟಿರಲಾರದೆ ಅಳುತ್ತಾನೆಂದು! ಅದು ಯುದ್ಧಕ್ಕೆ ಹೋಗಿ ಬಾಂಬೇಬಿದ್ದು ಚಕಣಾ ಚೂರಾಗಿದ್ದರೂ ಪರವಾಗಿರಲಿಲ್ಲ. ಆದರೆ ಹೀಗೆ ಎಲ್ಲಾದರೂ ಉಂಟೆ— ಮುದಿ ಕುದುರೆಗಳ ಸಂಗಡ ನಿಲ್ಲಿಸಿ, ಒನ್, ಟೂ, ತ್ರೀ ಹೇಳಿ ಗುಂಡು

ಹೊಡೆದು ಕೊಲ್ಲಿಸುವುದೇ—ಹೀಗೆಲ್ಲ ಸಾವಿರಬಾರಿ ಚಿತ್ರಿಸಿಕೊಂಡು ಬಹು ವಾಗಿ ಅತ್ತುಬಿಟ್ಟೆ. ನಾನು ಯಾರಗೋಜಿಗೂ ಹೋಗದೆ ಹಿತ್ತಲ ದಾಳಿಂಬೆ ಮರದ ಬುಡದಲ್ಲಿ ಕೂತುಬಿಟ್ಟೆ.

ಆದರೆ ಖಾಸೀಮನು ಮೆರವಣಿಗೆಯನ್ನು ಇನ್ನೂ ಸ್ವಲ್ಪದೂರ ಸಾಗಿಸಿ ಕೊಂಡು ಹೋಗಿ, ದೊಡ್ಡ ಅಧಿಕಾರಿಗಳು ಬರುವ ಕಡೆ ನಿಲ್ಲಿಸಿದನಂತೆ. ಅವರು ತಮ್ಮ ಕುದುರೆ ನಿಲ್ಲಿಸಿ, ವಿಚಾರಿಸಿದರಂತೆ. ಅನಂತರ "ಏನಯ್ಯಾ, ನೌಕರ, ಜೂಜಿನಲ್ಲಿ ಗೆಲ್ಲುವುದಕ್ಕೆ ಮುಂದಾಗಿಯೇ ಮೆರವಣಿಗೆ ಮಾಡಿ ಸಿದ್ದೀಯ! ನಿಮ್ಮ ಯಜಮಾನರಿಗೆ ಹೇಳು. ಈ ಕುದುರೆ ಜೂಜಿಗೆ ಬರಲಿ. ಇದನ್ನ, ಅದೆಲ್ಲಿಗೋ ಬರಕೊಂಡಿದ್ದರಲ್ಲ, ಅಲ್ಲೆಲ್ಲಿಗೂ ಕಳಿಸ ಕೂಡದಂತೆ ಎಂತ ಹೇಳೋ, ಬೇಕೂಫಾ! ಎಂಥಾ ಕುದುರೆ, ಭಲೆ! ನೀನೇನೋ ಬಿದ್ದವನು? ಥೂ ನಿನ್ನ! ಜಿಗಣೆ ಹಿಡಿದ ಹಾಗೆ ಹಿಡಿದಿರ ಬೇಕೋ ಇಲ್ಲೋ! ಇರಲಿ ನಡಿ ನಾನು ಹೇಳಿದೆ ಎಂತ ಹೇಳು. ಈ ಚೀಟಿ ಕೊಡು. ಇದರಲ್ಲಿ ನಿಮ್ಮ ಕುದುರೆ ತೂಕ, ಹೆಸರು, ವಯಸ್ಸು ಬರೆಸಿ ಕೊಂಡು ಬಾ!" ಎಂದು ಅವರು ಹೊರಟು ಹೋದರಂತೆ.

ಆ ಮೆರವಣಿಗೆ ಆದನಂತರ, ಆ ಪ್ರತಿಮೆಪೂಜೆಗೆ ಬಂದನಂತರ ಮತ್ತು ಆ ಫೋಟೋ ತೂಗುಹಾಕಿದನಂತರ ಎಲ್ಲ ಬದಲಾಯಿತು. ಸಾವಿನ ಉಬ್ಬರಜಲ ತಾನೇತಾನಾಗಿ ಇಳಿದುಹೋಯಿತು.

ಜೂಜಿನಲ್ಲಿ ಗೆದ್ದುದಕ್ಕೆ ಇನ್ನೊಂದು ಮೆರವಣಿಗೆ ಸರ್ಕಾರಿ ಖರ್ಚಿ ನಲ್ಲಾಯಿತು. ಕಾಶಿ ಅನಂತರ ಕುಣಿಗಲು ಫಾರಂನಲ್ಲಿ ಗಂಡನನ್ನು ಹುಡುಕಿಕೊಂಡು, ನಾಲ್ಕು ದಿನ ಸುಖವಾಗಿದ್ದು ಖಾಸೀಮನ ಸಂಗಡ ದೇಶವೆಲ್ಲ ತಿರುಗಿ ನಮ್ಮಲ್ಲಿಗೆ ತಿರುಗಿಬಂತು. ನಮ್ಮ ಅಣ್ಣನವರು ಬೈಸಿಕಲ್ ತೆಗೆದುಕೊಂಡರು. ಕಾಶಿಗೆ ಕಾಲಕ್ರಮದಲ್ಲಿ ಕೂಸಾಯಿತು. ಆ ಕೂಸು ಹಾಲುಕುಡಿದು ಚಿನ್ನಾಟವಾಡಿದರೆ ನನಗೆಷ್ಟೋ ಸಂತೋಷ. ನಾನು ಹಿತ್ತಲಲ್ಲೇ ಬಹಳ ಹೊತ್ತು ಕುಳಿತರೆ ನಮ್ಮ ತಾಯಿ ಒಮ್ಮೆ ಕೂಗುವರು. ಮತ್ತೆ ತಾವೇ ಬಂದುನಿಂತು ನೋಡಿ ಹೇಳುವರು. "ನೋಡಪ್ಪಾ ನಿಮ್ಮಣ್ಣ ಕಾಶೀಗೆ ಗುಂಡು ಹೊಡಿಸೇಬಿಟ್ಟ! ಅ, ನೋಡಿ ದೆಯಾ! ಈ ಮರೀಗೆ ಗುಂಡೂ ಎಂತಲೇ ಹೆಸರಿಡು. ನೋಡಿದನೋ,

ನಿಮ್ಮಣ್ಣ ಮಗೀನ, ಏನೋ ಹೆಣ್ಣು ಕುದುರೆ ಸ್ವಲ್ಪ ತಂಟೆಮಾಡಿದ್ದಕ್ಕೆ ಗುಂಡು ಹೊಡಿಸಿಬಿಡುತ್ತೇನಮ್ಮ! ಎಂದ. ಯಾರ ಹಠ ಸಾಗಿಸು, ಕಾಶೀ ಏನಂತೀಯೋ! ತೊಟ್ಟಿಲೇ ಬೇಕೇನೇ ಮಗೀಗೆ" ಹೀಗೆಂದು ನಗುತ್ತಾ ಹೋಗುವರು. ಹೀಗೆ ಎಷ್ಟೋಬಾರಿ ಅವರ ಹಗರಣೆ ಮಾತು ಕೇಳಿದೆ, ನಮ್ಮ ಅಣ್ಣನವರೂ ಕೇಳಿರಬಹುದು, ಕಾಶಿ ಕುದುರೆಯೂ ಕೇಳಿರ ಬಹುದು. ಖಾಸೀಮನಂತೂ ಕೇಳಿಯೇ ಇದ್ದಾನೆ.

o o o

ನಾನು ಮುಂದೆ ಓದುವುದಕ್ಕೆ ಹೊರಟುಹೋದೆ. ಹಿಂತಿರುಗಿದಾಗ ಆ ಸಂಸಾರದ ಕನ್ನಡಿಯೇ ಒಡೆದುಹೋಗಿತ್ತು. ಶಿವರಾಂಪೇಟೆಗೆ ಹೋಗಲು ಮನಸ್ಸಾಗದೆ ಹಿಂತಿರುಗಿದೆ.

o o o

ಇಷ್ಟು ಬರೆದಮೇಲೆ ಖಾಸೀಂ ನನ್ನನ್ನು ಕಾಡಿಸುವುದಿಲ್ಲ. ಅವನ ಕುದುರೆ ನನ್ನ ಮೆದುಳಲ್ಲಿ ಗೊರಸೂರುವುದಿಲ್ಲ.



# ೪. ಭಯನಿವಾರಣೆ

೧

“ಭಯ, ದಿಗಿಲು, ಅಂಜಿಕೆ, ಹೆದರಿಕೆ—ಇವು ಎಲ್ಲವೂ ಒಂದೇ ಭಾವದ ಶಾಖೋಪಶಾಖೆಗಳು. ಯಾವಾಗ್ಗೆ ಮನುಷ್ಯನಲ್ಲಿ ಭಯವು ಹುಟ್ಟಿತೋ ಆಗ್ಗೆ ಮನುಷ್ಯನು ಮೃತನಂತೆ.

“ಭಯೇ ವ್ಯಾಪಿಲೇ ಸರ್ವ ಬ್ರಹ್ಮಾಂಡ ಅಹೇ ।
ಭಯಾತೀತ ತೇ ಸಂತ ಆನಂದ ಪಾಹೇ ।”

ಹೀಗೆಂದು ರಾಮ ಸಮರ್ಥರು ಶ್ರೀ ಶಿವಾಜಿಗೆ ಹೇಳಿದ್ದಾರೆ. “ಭಯಾತೀತ ನಾಗಬೇಕು ಆನಂದ ಬರಲು ಬಯಸಿದರೆ!” ಹೀಗೆಲ್ಲ ಹೇಳಿದ ರಾಣೋಜೀ ರಾಯ. ಸುಂದರ ತರುಣಿ ಆತನ ಸತಿ ಎಲ್ಲಮ್ಮ ಕೇಳಿದಳು. ನೀಳವಾಗಿ ನಿಂತಿದ್ದವಳು ಸರ್ರನೆ ಆತನ ಕಡೆಗೆ ಸರಿದು ಬಂದು ಅವನ ಕೈಲಿದ್ದ ಪುಸ್ತಕ ವನ್ನು ಕಿತ್ತು ಬಿಸಾಟು ಮಲ್ಲಿಗೆಯ ಅಂಟಾಗಿ ಒಲಿದೊಲಿದು ಆತನ ಮೈಗೆಲ್ಲ ಹಬ್ಬಿಕೊಂಡಳು.

“ನೋಡಿ! ನಿಮ್ಮಂಥ ಕೊಲೆ ಘಾತುಕರನ್ನೇ ತಬ್ಬಿಕೊಂಡು ಹಣ್ಣು ಮಾಡಿಬಿಟ್ಟೆ—ಕ್ರೂರ ಯುದ್ಧದಲ್ಲಿ! ನನಗೆಲ್ಲಿಯ ಭಯ? ಎಂಥೆಂಥವರ ಎದೆ ಯಲ್ಲೂ ಭಯಹುಟ್ಟಿಸುವ ಮೃಗರಾಜ ಸಿಂಹನನ್ನು ಬೆನ್ನುತಟ್ಟಿ ಎಬ್ಬಿಸಿ— ಅದು ‘ಆಂ’ ಎಂದು ಆರ್ಭಟಿಸಿದಾಗ ಅದರ ಬಾಯೊಳಗೆ ಕೈ ಹೊಗಿಸಿ ಅದರ ಹೃದಯವನ್ನು ಕಿತ್ತು ತೆಗೆಯುವ ನಿಮ್ಮಂಥವರನ್ನು ಮಿದುವುಮಾಡುವ ಶಕ್ತಿ

ನನಗೆ ಇದೆ. ಭಯವೆಲ್ಲಿಯದು ನನಗೆ? ನಿಮ್ಮನ್ನು ಅಂಜಿಸುವ ಬೆಂಕಿಯನ್ನು ನಾನು ಹೇಗೆ ಇಟ್ಟಾಡಿಸುವೆನು ನೋಡಿರಿ. ಯಾವಾಗ ಏನು, ಹುರಿ-ಕರಿ-ಸಯಿಸೆಂದರೆ—ಅವೆಲ್ಲ ತತ್‌ಕ್ಷಣವೇ ಮಾಡುವುದಿಲ್ಲವೆ?—ಆ ಬೆಂಕಿ!-ನನ್ನ ಸರಿಯಾಳಾಗಿ!"

ಈ ಮಾತಿಗೆ ರಾಣೋಜಿ "ಜಾಣೆಯೇ ಸರಿ ನನ್ನಾಕೆ! ತಬ್ಬಿಕೊಂಡು ತಬ್ಬಿಬ್ಬುಮಾಡಿದೆ. ಫಣಿವೇಣಿಯಿಂದ ಕೈಗಳನ್ನು ಬಿಗಿದುಬಿಟ್ಟೆ. ಈಗ ನೆಟ್ಟ ದಿಟ್ಟಿಯಿಂದ ನನ್ನ ಎದೆಯನ್ನು ಚುಚ್ಚುತಲಿರುವೆ—ಸರಿ, ಎನ್ನು—ಆದರೆ ಹೀಗೇ, ಇಂಥಾದ್ದೇ, ಒಂದು ಸರ್ಪಬಂದಿತು ಎನ್ನೋಣ-ನಿನ್ನ ಮೈಗೆ ಹೀಗೆ ಸುತ್ತಿತು ಎನ್ನೋಣ—ಆಗ?"

ಎಲ್ಲಮ್ಮ "ಮಾಡುವುದೇನು? ನೀವು ಇರುತ್ತೀರಲ್ಲ ಹತ್ತಿರ. ಚಾಕು ಬಿಚ್ಚಿ ಪಡುವಲ ಕಾಯಿ ಹೆಚ್ಚಿದಂತೆ ಹೆಚ್ಚಿ ಬಿಡಿ ಎನ್ನುವೆನು. ನೀವು...."

ರಾಣೋಜಿ "ಆಹಾ, ನಾನಿರಲಿಲ್ಲ ಎಂದುಕೋ"

ಎಲ್ಲಮ್ಮ "ನಿಮ್ಮನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ ಕಂಡಿರ!"

ರಾಣೋಜಿ "ಮುಸಲ, ದೊಡ್ಡ ಆನೆ ಬಂತು! ಸೊಂಡಿಲು ಅಲ್ಲಾಡಿಸುತ್ತ—ಹೆಜ್ಜೆಹೆಜ್ಜೆಗೂ ಭೂಮಿಯನ್ನು ನಡುಗಿಸುತ್ತ—ಬಂದಿತು ಎಂದುಕೋ. ಆಗ್ಗೆ!"

ಎಲ್ಲಮ್ಮ "ಸೊಂಡಿಲ ಒಳಗೆ ಕಟ್ಟೆರುವೆಯಾಗಿ ಹೋಗಿ ಕಚ್ಚುವೆನು. ಆಗ ಎಂತಿದ್ದರೂ ಸತ್ತೇ ಸಾಯುವುದು."

ರಾಣೋಜಿ "ಹೀಗೆಲ್ಲ ಅಡ್ಡಾದಿಡ್ಡಿಯಾಗಿ ಮಾತಾಡಲಿಕ್ಕೇ ಸರಿ, ಎಲ್ಲಿ ಹೇಳು. ಉತ್ತರಕುತ್ತರ ಸರಿಯಾಗಿ ಹೇಳಬೇಕು. ಹೂ!"

"ಹೂಂ ಕೇಳುವಂಥವರಾಗಿ. ಹೆದರುವರಾರು!" ಎಂದು ಉತ್ತರ ಕೊಡಲು ಸಿದ್ಧಳಾದ ಕಾಂತೆಯು, ತನ್ನ ಅರಳೀಪೇಟಿ ಸೀರೆ ನೆರಿಗೆಯನ್ನು ನವಿಲು ಬಾಲದಂತೆ ಕೆದರಿಕೊಂಡು ಕುಳಿತಳು. ಹೇಳಿ ನೇಯಿಸಿಕೊಂಡದ್ದು ಆ ಸೀರೆ ಬೆಂಗಳೂರಿನದು. ಸೆರಗಿನಲ್ಲಿ ಮೋಡ ಮುಸುಕಿದ ಆಕಾಶ. ಒಡಲೆಲ್ಲ ಜರತಾರಿ ನವಿಲುಕಣ್ಣು. ಯಾವ ಹೆಂಗಸೂ ಎಂದೂ ಉಡದಂಥ ಸೀರೆ.

ರಾಣೋಜಿ ಚಪ್ಪಾಳೆ ತಟ್ಟಿಕೊಂಡು ಕುಣಿದುಬಿಟ್ಟ. "ಯಾಕೇಂದ್ರೆ ಇದೇನು ಕುಣಿತ!" "ಸಿಂಹದ ಮೇಲೆ ನವಿಲು ಕುಳಿತುಬಿಟ್ಟಿವೆ. ಹಾ,

ಹಾಹಾ!” ಎಂದು ಮತ್ತೆ ಕುಣಿದ. ಚಪ್ಪಾಳೆ ತಟ್ಟಿದ. ಎಲ್ಲಮ್ಮ ತಿರುಗಿ ನೋಡಿದಳು. ಹೌಹಾರಿ ಬೆದರಿ ಎದ್ದೋಡಿದಳು. ಸಿಂಹದ ತಲೆಯ ಮೇಲೆ ಕುಳಿತುಬಿಟ್ಟಿದ್ದಳು ಆಕೆ. ರಾಣೋಜಿ ತತ್‌ಕ್ಷಣವೇ ಮೇಜಿನ ಮೇಲಿದ್ದ ಬಂದೂಕನ್ನು ತೆಗೆದು ಕೈಲಿ ಕೊಡಹೋದನು. “ಹಿಡಿ! ಶೂರಾಗ್ರಣೀ. ಇದು ಬಾರುಮಾಡಿದ ಬಂದೂಕು. ಹೊಡೆದು ಕೊಂದುಬಿಡು ಆ ಸಿಂಹವನ್ನು! ಹೀಗೆ ಹಿಡಿ, ಗುರಿ ಇಡು, ಕುದುರೆ ಎಳಿ, ಸುಟ್ಟುಬಿಡು—ಆ ಸಿಂಹವನ್ನು. ಅಬ್ಬಬ್ಬ ಎಷ್ಟೊಂದು ಧೈರ್ಯ ಆ ಕರುಳಿಲ್ಲದ ಸಿಂಹಕ್ಕೆ?”

ಎಲ್ಲಮ್ಮ ಸಿಟ್ಟಾದಳು. ಆ ಸಿಟ್ಟು ಅವಳ ಸೌಂದರ್ಯವನ್ನು ಇನ್ನೂ ಹೆಚ್ಚಿಸಿತು. ಝುರಿಯು ಜಲಪಾತವಾದ ಹಾಗೆ! “ಕರುಳೂ ಇಲ್ಲ, ಎದೆಯೂ ಇಲ್ಲ. ನೀವು ಇಂಥ ಸತ್ತ ಸಿಂಹಗಳನ್ನೆಲ್ಲ ತಂದಿಟ್ಟು—ನಿಮ್ಮ ಕೋಣೆಯ ಸೌಂದರ್ಯವನ್ನೆಲ್ಲ ಕೊಂದೇ ಬಿಟ್ಟಿದ್ದೀರಿ. ಇಷ್ಟಕ್ಕೆಲ್ಲ ಹೆದರಲೇಕೆ?” ರಾಣೋಜಿ “ಹೌದೌದು! ನೀನೀಗನೋಡು, ಅಂಜಿಲ್ಲ. ನಿನ್ನ ಮೈ ನಡುಗ ಲಿಲ್ಲ. ಕಣ್ಣುಗಳಲ್ಲಿ ನೀರೂ ಸಹ ತುಂಬಿಲ್ಲ. ಪಾಪ! ಆ ಸಿಂಹವೇ ತಾನೆ, ನಿನ್ನ ಸೋಂಕಿಗೆ ಸತ್ತು ಒಣಗಿ ಚರ್ಮವಾಗಿ ಹೋಗಿಬಿಟ್ಟಿದೆ.” ಎಲ್ಲಮ್ಮ ನೇನೂ ಹೇಳಲಿಲ್ಲ. ಗೇರುಸೊಪ್ಪೆ ಜಲಪಾತದ ಚಿತ್ರವೊಂದನ್ನು ನೋಡುತ ನಿಂತಳು.

ಮತ್ತೆ ರಾಣೋಜಿಯೇ ಆಕೆಯ ಹತ್ತಿರಕ್ಕೆ ನಡೆದನು. “ಬಾ ಹೆಣ್ಣೆ! ನನ್ನ ಪ್ರಯತ್ನವೆಲ್ಲ ವ್ಯರ್ಥವಾಯಿತು. ಹೆಂಗುಸಲ್ಲವೆ ನೀನು? ವೀಣೆ ಹಿಡಿಯುವುದೇ ಹೆಚ್ಚಿನ ಕೆಲಸ ನಿನ್ನದು. ಬಾರಿಸು ನಿನ್ನ ವೀಣೆ. ಭಯ ಭ್ರಾಂತಿ ಹೋಗಲಿ. ಸೆರಗು ಹೊದ್ದಿಸಲಾದರು ಹತ್ತಿರ ಬರಬಹುದೇ ರಾಣಿ ಸಾಹೇಬರೇ! ಚಂಚು! ಇವರಿಗೆ ಸಂಗೀತ ಮಂದಿರದ ದಾರಿ ತೋರಿಸು.”

ಎಲ್ಲಮ್ಮ ಕಸರಿಕೊಂಡು ಹಿಂತಿರುಗಿದಳು. “ಸಂಗೀತ ಮಂದಿರವಂತೆ, ನಾಟ್ಯಶಾಲೆಯಾಕಾಗಬಾರದು! ಮೃತ್ಯುವಿಗೆ! ನೆಟ್ಟಗೊಂದು ಅಡುಗೆಮನೆ ಯಿಲ್ಲ ನನ್ನಭಾಗ್ಯಕ್ಕೆ ಈ ಕಾಡಲ್ಲಿ! ನಮ್ಮ ದೇಶದ ಗೋಂಡಾರಣ್ಯವೇ ವಾಸಿ. ದೇಶವಲ್ಲದ ದೇಶ! ಕಾಡಲ್ಲದ ಕಾಡು. ಇಂಥಾ ಬಳಿಗೆ ಹೊತ್ತು ತಂದಿದ್ದೀರಿ ನನ್ನ. ಸೀತಮ್ಮನವರಿಗಾದರೂ ಇಷ್ಟು ಕಷ್ಟವಿತ್ತೋ ಇಲ್ಲವೋ ಆ ಕಾಡಲ್ಲಿ! ಆ ಲಂಕೆಯಲ್ಲಿ! ಊಳಿಗಕ್ಕೆ ಈ ನೀಗ್ರೋ ರಾಕ್ಷಸರು. ನರಭಕ್ಷಕರು! ಈ

ನನ್ನ ಬಾಳಿನ ಬಳಗಕ್ಕೆ ಪೀತಾಂಬರದ ಸಿಂಗವ್ವ, ಬೇಂಗಟೀ ಬೇತಾಳ ಜರಾಃಫೆ, ಕೋಡುಮುಸುಡಿ ಎಮ್ಮೆ. ಓಹೋಹೋ ಏನೂಂತ ಕೊಚ್ಚಿ ಕೊಳ್ಳುವಿರೀಂದ್ರೇ ! ನಿಮ್ಮ ಹೆಮ್ಮೆ ಹಲಸಿನಕಾಯಿ !”

ಇಷ್ಟೆಂದ ಮೇಲೆ ಸಹ ಕೋಪ ಮಾಡದಿದ್ದರೆ ಅವನೆಂಥಾ ಗಂಡಸು ! ರಾಣೋಜಿಗೆ ತನ್ನ ದೇಶದ ನೆನಪು ಬಂತು. ಕಿಟಕಿಯಿಂದಾಚೆ ನೋಡುತ್ತ ನಿಂತ. ಹೇಳಿದ “ನಿನ್ನ ಉಡಿಗೆತೊಡಿಗೆಯ ಅತ್ಯಾಶೆಗಾಗಿಯೇ ಇಲ್ಲಿಗೆ ಬಂದದ್ದು, ಈ ಆಫ್ರಿಕಕ್ಕೆ. ನಿನ್ನ ರತ್ನದ ಕಂಠಿ, ನಿನ್ನ ಬೆಡಗಿನ ಸೀರೆ— ಆ ನಿನ್ನ ಬೆಳ್ಳಿ ಬಂಗಾರವೆಲ್ಲ ಬರುತ್ತಿತ್ತೆ ನಿನ್ನ ದೇಶದಲ್ಲಿದ್ದಿದ್ದರೆ ? ಇಂಡಿಯದಲ್ಲಿ ? ಕನ್ನಡ ನಾಡಿನಲ್ಲಿ ! ಅದೂ ಮೈಸೂರಲ್ಲಿ ! ಆ ನೂಕು ನುಗ್ಗಲಲ್ಲಿ ! ಆ ಬಡತನದಲ್ಲಿ ! ನಡಿ, ವೀಣೆಬಾರಿಸುತ್ತ ಕುಳಿತಿರು—ಊಟದ ಹೊತ್ತಿಗೆ ನಾನೊಂದಿಷ್ಟು ಅಡ್ಡಾಡಿ ಬರುವೆನೆ”ಂದು ಕೈಲಿ ಬಂದೂಕು ಹಿಡಿದು ಹೊರಗೆ ಹೊರಟೇಬಿಟ್ಟನು.

ಮಧ್ಯ ಆಫ್ರಿಕದ ಕಾಡು ! ಕಾಡಿನ ನಡುವೆ ರಾಣೋಜಿಯ ಮರ ಮುಟ್ಟುಗಳ ಬಂಗಲಿ. ಸುತ್ತಣ ಕಾಡು ಕತ್ತರಿಸಿ ಆರು ತಿಂಗಳಾಗಿಲ್ಲ. ಈಗಾಗಲೆ ಬಂಗಲಿಯನ್ನು ಬಳಸಿ ಬಂದಿದೆ ಕಾಡುಪೊದೆ. ಸ್ವಲ್ಪ ದೂರ ಹೋದ ರಾಣೋಜಿಯು ಒಂದು ಮರವನ್ನು ಹತ್ತಿ ಕುಳಿತುಕೊಂಡನು. ಇತ್ತ ಜೇಡನೊಂದು ಪುಟ್ಟ ಹಕ್ಕಿಯನ್ನೇ ಹಿಡಿದು ಹೀರುತಲಿದೆ ರಕ್ತ. ಅತ್ತ ಕೋತಿಯೊಂದು ಬಾಲವನ್ನು ದೊಡ್ಡ ಬಳ್ಳಿಯೊಂದಕ್ಕೆ ಸುತ್ತಿ ಜೋಕಾಲೆ ಯಾಡುತಲಿದೆ. ಅದೋ ಅಲ್ಲಿ ನೀರಿನ ಬಳಿ ಪಟ್ಟೇಕತ್ತೆಗಳು ಹಿಂಡುಹಿಂಡಾಗಿ ಮೇಯುತಲಿವೆ. ಕಣ್ಣಿಗೆ ದುರ್ಬೀನು ಹಿಡಿದು ನೋಡಿದನು—ದೂರದ ಬೆಟ್ಟ—ಅದರ ಇಳಿಜಾರಲ್ಲಿ ನಾಲ್ಕೈದು ಖಡ್ಗಮೃಗಗಳು ಮೇಯುತಲಿವೆ. ಅದರಾಚೆ—ಕೆಸರು—ಅಲ್ಲಿ ನೀರ್ಗುದುರೆಗಳು ಹಾಯಾಗಿ ಮಲಗಿವೆ. ಇತ್ತ ದಕ್ಷಿಣ ದಿಕ್ಕಿನಲ್ಲಿದೆ ಆ ನಗರ. ಅದಕ್ಕೆ ನೀರಿನ ವ್ಯವಸ್ಥೆಮಾಡಲಿಕ್ಕಾಗಿಯೇ ರಾಣೋಜಿಯು ಬಂದುದು. ಇಂಜನಿಯರಾಗಿ ಇಂಡಿಯದಲ್ಲಿ ಇರಲೊಲ್ಲದೆ ಆಫ್ರಿಕಕ್ಕೆ ಬಂದಿದ್ದನು. ಕೆನಿಯಕ್ಕೆ ಬಂದು, ಅಲ್ಲಿಂದ ಲಕ್ಷ್ಮಿಯ ಹೆಜ್ಜೆಯ ಜಾಡನ್ನು ಹಿಡಿದು ಇಲ್ಲಿಗೆ ಬಂದಿದ್ದನು. ಈಗಾಗಲೆ ಒಂದೆರಡು ಬಾರಿಯ ಕೆಲಸಗಳನ್ನುಮಾಡಿ ಹಣವಂತನಾಗಿರುವನು. ಬೇಟೆಯಲ್ಲಿ ಸಿಕ್ಕಿದ ಮೃಗಗಳ

ಚರ್ಮಗಳಿಂದಲೇ ಬಹಳ ಬಂಗಾರ ಬಂದಿದೆ. ಇಲ್ಲಿಯ ಜೀವನವಾಗಲೀ, ಕೆಲಸವಾಗಲೀ ಕಷ್ಟತರವಾಗಿರಲಿಲ್ಲ ರಾಣೋಜಿಗೆ. ಕಷ್ಟವಾಗಿ ತೋರಿದ್ದು ಹೆಂಡತಿಯ ಭಯನಿವಾರಣೆ. ಅವಳು ಧೈರ್ಯ ಕಲಿತು ಕಾಡಿನಲ್ಲಿ ಓರ್ವಳೇ ಇರುವಳಾದರೆ, ಅನುಕೂಲ ಹೆಚ್ಚು. ಇನ್ನು ಮುಂದಿನ ಠಾವಾದರೋ ಸಿಂಹ ಹೆಬ್ಬಾವುಗಳ ಬೀಡು ಎಲ್ಲಮ್ಮ ಧೈರ್ಯಕಲಿಯದೆಲೆ ಏನೇನೂ ಆಗುವಂತಿಲ್ಲ. ಅದಕ್ಕಾಗಿ ಎಲ್ಲಾ ಜಾತಿಯ ಮೃಗಗಳ ಚರ್ಮಗಳನ್ನೂ ತಂದು ತನ್ನಕೋಣೆಯಲ್ಲಿ ಅಲಂಕಾರವಾಗಿ ಹರಡಿರುವನು. ಇಷ್ಟು ದಿನಗಳಾದರೂ ಕೂಡ ಸತ್ತ ಮೃಗಗಳನ್ನು ಕಣ್ಣೆತ್ತಿ ನೋಡುವ ಧೈರ್ಯ ಸಹ ಎಲ್ಲಮ್ಮಸಿಗೆ ಬರಲಿಲ್ಲ. ಮುಂದಿನ್ನೇನು ಉಪಾಯ ಹೂಡಲೆಂದು ಯೋಚಿಸುತ್ತಿರುವಲ್ಲಿ—ಊಟದ ತುತ್ತೂರಿ ಕೇಳಿಬಂತು. ಕೊಂಬೆಯಿಂದ ಕೊಂಬೆಗೆ ಇಳಿದಿಳಿದು ಮನೆಗೆ ಬಂದನು. ಯಾರನ್ನೂ ಮಾತನಾಡಿಸದೆಲೆ ತನ್ನ ಅರ್ಧಾಂಗಿಯನ್ನು ಕಾಣಲು ಭೋಜನ ಶಾಲೆಗೆ ನಡೆದನು. ಅಂದು ಸರಸ ಸಲ್ಲಾಪಗಳಿಲ್ಲದೆಲೆ ಊಟದ ರುಚಿ ಕೆಟ್ಟುಹೋಯಿತು.

೨

ಉರಿ ಬಿಸಿಲಿನ ಹಗಲೊಂದು, ಉದ್ವೇಗದ ರಾತ್ರಿಯೊಂದು ಕಳೆದವು. ಭಾಮಿನಿಗೆ ಭಯನಿವಾರಣೆಯಾಗಲಿಲ್ಲವೆಂದು ಯೋಚನೆಯು ಅತ್ಯುತ್ಕಟವಾಯಿತು ರಾಣೋಜಿಗೆ. ಇನ್ನೂ ಮುಂದೆ ಭಯಂಕರವಾದ ಕಾನನಗಳಿಗೆ ಹೋಗಬೇಕು. ನದಿಯ ನೀರು ಎಲ್ಲಿ ಎತ್ತರದಲ್ಲಿದೆಯೋ ಅಲ್ಲಿಂದ ಕಾಲುವೆ ತೋಡುವ ವ್ಯವಸ್ಥೆಮಾಡಬೇಕು. ಆ ಸ್ಥಳಗಳನ್ನು ಹುಡುಕುತ್ತಾ ಇನ್ನೆಲ್ಲೆಲ್ಲಿಗೆ ಹೋಗಬೇಕಾದೀತೋ ಬಲ್ಲವರಾರು! ಸುತ್ತ ಪಹರೆಗಳನ್ನು ಹೆಚ್ಚಿಸೋಣವೆ ಸತಿಯ ಸೌಖ್ಯಕ್ಕೆ? ಯಾರನ್ನು ನಂಬಿ ಬಿಟ್ಟು ಹೋಗಬೇಕು? ಇಬ್ಬರು ನೀಗ್ರೋಗಳನ್ನು ಕಾಡಿನ ಮಧ್ಯೆ ನಂಬುವುದಕ್ಕೆ ಸಾಧ್ಯವಿಲ್ಲ.

"ಎಲ್ಲಮ್ಮ ನೋಡಲಿಕ್ಕೆ ಬಲು ಸೌಮ್ಯ-ಸುಂದರ, ಮಂದರ-ಮಧುರ, ಕೋಮಲ—ಯಾರ ಬಾಯಿಗಾದರೂ ತುತ್ತಾದಾಳು. ಇಲ್ಲಿ ಯಾಕಾದರೂ ಈಕೆಯನ್ನು ಕರತಂದೆನೋ, ಬಂದೂಕು ಹಿಡಿಯಲಿಕ್ಕೆ ಕೂಡ ಇವಳಿಗೆ ಬರಲಿಲ್ಲವಲ್ಲ. ಮುಂದೇನು ಮಾಡಲಿ? ಕೆನಿಯದೇಶದಲ್ಲಿರುವ ನೆಂಟರಲ್ಲಿಗಾದರೂ

ಹೋಗೆಂದರೆ ಹೋಗಳಲ್ಲ. ಆಗಲಿ, ಇನ್ನೂ ಮುನ್ನೂ ಪ್ರಯತ್ನಮಾಡಿ ಸತ್ತ ಪ್ರಾಣಿಗಳನ್ನು ತಂದು ಮುಂದಿಟ್ಟು ಆಕೆಗೆ ಭಯ ಹೋಗುವುದೇನೋ ನೋಡುವೆನು. ಮನುಷ್ಯನು ತನ್ನ ಎಚ್ಚರದಲ್ಲಿದ್ದರೆ ದುಷ್ಟ ಜಂತುಗಳೇನು ಮಾಡಿಯಾವು? ಅವುಗಳಿಗೆ ಯಥಾ ಪ್ರಕೃತಿವಿಧಿಯಾದ ಒಂದೊಂದೇ ಮಾರ್ಗಗಳು. ನಮಗಾದರೊ ಬುದ್ಧಿ ವಿಕಾಸದ ಹಲವು ಮಾರ್ಗಗಳು. ಜೀವಿಗಳು ಆತ್ಮರಕ್ಷಣೆಗೆ ದುಷ್ಟತನ ತೋರಿಸುವವು—ಮನುಷ್ಯ ಜೀವಿಯು ತನ್ನ ಹಿರೇತನವನ್ನು ತೋರಿಸಿಕೊಳ್ಳಬೇಕು. ಈ ಯುದ್ಧದಲ್ಲಿ ಆದಿಯಿಂದಲೂ ಮನುಷ್ಯನೇ ಜಯಿಸಿ ನಿಂತು ಬದುಕಿ ಬಂದವನು. ಎಲ್ಲಮ್ಮನ ಭಯ ನಿವಾರಣೆಗೆ ಉಪಾಯವಿದ್ದೇ ಇದೆ. ಸತ್ತ ಸಿಂಹಗಳನ್ನೂ ಹೆಬ್ಬಾವುಗಳನ್ನೂ ತಂದು ಕೋಣೆಯಲ್ಲಿ ಜೋಡಿಸಿ ಇಡಬೇಕು. ಸತ್ತವನ್ನು ಮುಟ್ಟಿ ಅಭ್ಯಾಸವಾದರೆ ಸಾಕು. ಆಕೆಗೆ ಆ ಕೋಣೆಯಲ್ಲಿರುವಷ್ಟು ಧೈರ್ಯ ಬಂದರೆ ಸಾಕು. ಎಲ್ಲಿಯಾದರೂ ಹೋಗಿ ಬರುವವರೆಗೆ ಹೆಂಡತಿ ಬದುಕಿರುವಳೆಂದು ಧೈರ್ಯದಿಂದಿರಬಹುದು. ಆಳುಗಳು ಯಾರೂ ಆ ಕೋಣೆಗೆ ಬರುವುದಿಲ್ಲ. ಬಲು ಹೆದರುವರು. ಕಾಡಿನಲ್ಲಿ ಆರ್ಭಟಿಸುವ ಮೃಗಗಳಿಗೆ ಅವರು ಹೆದರುವುದಿಲ್ಲ. ಆದರೆ ಈ ನನ್ನ ಸತ್ತ ಪ್ರಾಣಿಗಳನ್ನು ಕಂಡರೆ ಬಲು ಭಯಪಡುವರು. ನನಗೆ ಅದ್ಭುತವಾದ ಮಂತ್ರ ಶಕ್ತಿಯಿದೆಯೆಂದು ಅವರು ಭಾವಿಸಿರುವರು. ಏನು ಮಾಡಿದರೂ ಒಬ್ಬೊಬ್ಬರೇ ನನ್ನ ಕೋಣೆಗೆ ಇಲ್ಲಿಯವರಾರೂ ಬರುವುದಿಲ್ಲ. ಈ ಭಾಗದಲ್ಲಿ ಎಲ್ಲಮ್ಮನಿಗೆ ಕ್ಷೇಮ. ನಾನಿಲ್ಲದಾಗ ಆಕೆ ಅಲ್ಲಿರುವುದಾದರೆ—ಯಾವದೊಂದು ಭಯವೂ ಇರದು. ಸತ್ತ ಮೃಗಗಳ ಸಂಗಡವಾದರೂ ಆ ಪುಣ್ಯಾಗಿತ್ತಿ ಇರುವುದಾದರೆ ಧೈರ್ಯದಿಂದ ಸುತ್ತುತ್ತ ಹೋಗಬಹುದು" ಎಂದು ಮುಂತಾಗಿ ಅಲೆ ಅಲೆಯಾಗಿ ಆಲೋಚನೆಗಳು ಬಂದುವು.

ರಾತ್ರಿ ಕಳೆಯಿತು ; ರಾಣೋಜಿಯ ಮುಖ ಕಳೆಗೂಡಿತು. ನಗುನಗುತ ಎಲ್ಲಮ್ಮನನ್ನು ಎಬ್ಬಿಸಿ 'ಕೋಕೋ' ಮಾಡಹೇಳಿದನು. ಹೊರಗೆ ಹೋಗಿ ನೀಗ್ರೊ ಆಳುಗಳನ್ನೆಲ್ಲ ಸಿದ್ಧವಾಗಿರ ಹೇಳಿದನು. ಗಿಣಿಯ ಬಳಿ ನಿಂತು ಮಾತಾಡಿಸಿದನು. ಉಪ್ಪುಪಕ್ಷಿಯನ್ನು ಎತ್ತಿನಿಲ್ಲಿಸಿದನು—ಅದು ಕೊಕ್ಕು ಬಿಚ್ಚಲು ಅದರ ಬಾಯಿಗೆ ಒಂದು ಪೆಪರ್‌ಮಿಂಟು ಹಾಕಿದನು ಈ ವೇಳೆಗೆ ನಾಯಿಗಳು ಮೋರೆ ನೋಡಿ ನೆಗೆಯಲಾರಂಭಿಸಿದವು. ಅವುಗಳನ್ನು ಬಿಚ್ಚಿ

ಬಿಟ್ಟು ಬೆನ್ನು ತಟ್ಟಿ ಕಳಿಸುವ ಹೊತ್ತಿಗೆ ಚಿಂಪಾಂಸೀ ಹ್ಯಾಟುಗಾಲು ಹಾಕುತ್ತ ಅವನ ಬಳಿಗೆ ಬಂದು ಕೈಕೊಟ್ಟು ನಡುವೇರಿತು. ಕಡೆಗೆ ಬೇರೆ ಮೃಗ ಶಾಬಕ ಗಳನ್ನು ಮಾತನಾಡಿಸಲು ಕೈಸಾಲೆಗೆ ಹೋದನು. ಅಂತು ಆ ದಿನ ಒಂದು ಬಗೆಯ ಆನಂದದಿಂದ ಕಾಡು ತಿರುಗಿಬರಲು ಹೊರಟನು ರಾಣೋಜಿರಾಯ.

ಬಹಳ ಬಿಸಿಲಾಗುತ್ತ ಬಂದಿತು. ಕಾಡಿನಿಂದ ಹವೆಯೇರಲು ಆರಂಭ ವಾಯಿತು. ಕೊಳೆತ ಸೊಪ್ಪುಸದೆಯ ವಾಸನೆ ಅಲ್ಲಲ್ಲಿ ಎದ್ದಿತು. ಎಷ್ಟೋ ಕಡೆ ಆಕಾಶವೂ ಕಾಣದು, ನೆಲವೂ ಕಾಣದು. ಮೇಲೆ ಸೊಪ್ಪು ಹೂ ಹಣ್ಣು ಗಳ ಹಂದರ; ಕೆಳಗೆ ಎಳೆ ಬಳ್ಳಿಗಳ ಪಂಜರ. ಹೂವಿಗೊಂದು ಚಿಟ್ಟೆ, ಎಲೆ ಗೊಂದು ಇರುವೆ, ಕೊಂಬೆಗೊಂದು ಕೋತಿ, ರೆಂಬೆಗೊಂದು ಪಕ್ಷಿ—ಝೇಂ ಯೆಂದು ಶಬ್ದ. ಕಾಲಿಟ್ಟು ತೆಗೆದರೆ ಸೊಳ್ಳೆಗಳು, ನೊಣಗಳು ಎದ್ದು ಹಾರು ವವು. ಮರಗಳ ಮೇಲೆ ಅಲ್ಲೊಂದಿಲ್ಲೊಂದು ಕೊಡಲಿಯ ಗುರುತು ಮಾಡಿ ಕೊಂಡು ಹೊರಟನು. ಬರಬರುತ ಕಾಡು ದಟ್ಟವಾಯಿತು. ಯಾವದು ಬಳ್ಳಿಯೊ ಮತ್ತಾವುದು ಹೆಬ್ಬಾವೊ ತಿಳಿಯಲು ಕಷ್ಟ. ಹಸುರು ಮುಸುಕಿದ ಪಂಕಗಳು ಗಟ್ಟಿ ನೆಲದ ಭ್ರಾಂತಿ ಹುಟ್ಟಿಸುವವು. ದೂರದಿಂದ ಸೊಗಡು ವಾಸನೆ ಬರುತಲಿದೆ—ಅದು ರಕ್ಕಸ ಕಮಲದ ಕಂಪು. ಮೃಗ-ಪಕ್ಷಿಗಳ ಕಲಕಲದಲ್ಲಿ ತಾನಾಡಿದ್ದು ತನಗೇ ಕೇಳಿಸದು. ಕಾಲಿಟ್ಟು ತೆಗೆದರೆ ಮಂಡಿ ಯುದ್ದದ ದರಗು—ಅದರ ಝುರಝುರ ಶಬ್ದ-ಆ ಶಬ್ದಕ್ಕೆ ಹಲವು ಹದಿನೆಂಟು ಜಾತಿ ಪ್ರಾಣಿಗಳು ಎದ್ದೋಡುವವು. ಸೂರ್ಯನು ನೆತ್ತಿಯ ಮೇಲೆ ಬಂದರೂ ಕೂಡ ಈ ಆಫ್ರಿಕದ ಕಾಡಿನಲ್ಲಿ ಗಾಂಢಾಂಧಕಾರದ ಭಯಂಕರ ಕನಸು.

ರಾಣೋಜಿಯು ಹಿಂತಿರುಗಿ ಕಣ್ಣಮೇಲೆ ಕಣ್ಣುಪಹರೆ ಇಟ್ಟು ನಡೆದು ಬಂದನು. ಮನೆಯು ಹತ್ತಿರ ಬಂದಿತು. ದೂರದಲ್ಲಿ ಅತ್ತ ಕಡೆ ಏನೋ ಕಂಡನು. ನಿಂತು ನೋಡಿದನು. ಏನೋ ಯೋಚನೆ ಹೊಳೆಯಿತು. ಮೊಗ ದಲ್ಲಿ ನಗೆ ಕಂಡಿತು. ಅರ್ಧ ಗಂಟೆಯ ಕಾಲ ನಡೆದಿರಬಹುದು. ಅವನ ಗಮನಕ್ಕೆ ನಡಿಗೆಯೆಂದು ಹೇಳುವುದು ತಾನೆ ಹೇಗೆ? ಯಾಕೆಂದರೆ—ಹತ್ತಿ, ಇಳಿದು, ಹಾರಿ, ಜಾರಿ ದೂರಸಾಗಬೇಕಾಗಿತ್ತು. ಅಲ್ಲೊಂದು ಮಾರು ದೂರ ದಲ್ಲಿ ಎರಡುವರೆ ಮಾರು ಉದ್ದದ ಹೆಬ್ಬಾವಿತ್ತು. ಮರದ ಕೊಂಬೆಗೆ ಬಾಲ ಸುತ್ತಿಕೊಂಡು ನೇತಾಡುತ್ತಲಿತ್ತು. ಒಂದೊಂದು ಬಾರಿ ವಲಿದಾಡಿ ಬಾಯಿ

ಕಳೆಯುವುದು. ನಾಲಿಗೆ ಸುಗಿಯುವುದು. ರಾಣೋಜಿಯು ನಿಂತನು, ನೋಡಿದನು, ಹೊಂಚು ಹಾಕಿದನು. ತೊಡೆಯ ಗಾತ್ರಕ್ಕಿತ್ತು. ಮೈಮೇಲೆ ಹಳದಿ ಬಣ್ಣ. ಬೆನ್ನ ಮೇಲೆ ನೀಲಿಯ ಪದ್ಮಗಳು. ಆ ಪದ್ಮದಳಗಳನ್ನು ಕೂಡಿಕೊಂಡು ಹಬ್ಬಿರುವ ಬಂಗಾರದ ಸರಿಗೆಯ ಬಳ್ಳಿ. ನೋಡಿ ಹಲವು ಬಗೆಯ ಆನಂದದ ಯೋಚನೆಗಳು ಅಂಕುರಿಸಿದವು. ಹತ್ತಿರದ ಮರಕ್ಕೆ ಒರಗಿದನು. ಕೋವಿಯನ್ನು ಹಿಡಿದೆತ್ತಿ ಗುರಿಯಿಟ್ಟನು. ತಲೆಹಿಂಭಾಗಕ್ಕೆ ಗಂಟಲ ಬಳಿಗೆ ಹೊಡೆದುಬಿಟ್ಟನು. ಆ ಶಬ್ದವು ನೂರು ಬಾರಿ ಪ್ರತಿಧ್ವನಿತವಾಗಿ ಕಾಡೆಲ್ಲ ನಡುಗಿಸಿತು. ಇತ್ತ ಸರ್ಪವು ಸುರುಳಿಸುರುಳಿಯಾಗಿ, ಮುರಳಿ ಮುರಳಿಯಾಗಿ, ತಿರುವಿ ತಿರುವಿ, ಏರಿ ಇಳಿದು ಕೆಳಗೆ ಬಿದ್ದಿತು. "ಹೆಂಡತಿಯ ಭಯ ಬಿಡಿಸಲು ಇದು ಸಹಕಾರಿಯಾಗಬಹುದು. ಆಳುಗಳಿಗೆ ಭಯ ಹೆಚ್ಚಿಸಲು ಮನೆಯಲ್ಲಿ ಇಡಬಹುದು. ಕಡೆಗೆ ಬೇಕಾದರೆ ಚರ್ಮವನ್ನು ಮಾರಬಹುದು. ಅಥವಾ ಇಂಡಿಯದಲ್ಲಿರುವ ಸ್ನೇಹಿತರಿಗೆ ಕಾಣಿಕೆಯಾಗಿ ಕಳುಹಬಹುದು." ಹೀಗೆಂದು ಭಾವಿಸುವಷ್ಟರಲ್ಲಿ ಒರಗಿದ್ದ ಮರವು ಪಕ್ಕಕ್ಕೆ ಸರಿದ ಹಾಗಾಯಿತು. ತಿರುಗಿ ನೋಡಿ ಗಾಬರಿಯಾದನು. ಆ ಮರಕ್ಕೆ ಸುತ್ತಿಕೊಂಡಿದ್ದ ಇನ್ನೊಂದು ಹೆಬ್ಬಾವಿನ ಮೇಲೆ ಭಾರ ಬಿಟ್ಟು ಒರಗಿ ನಿಂತಿದ್ದನ್ನು. ಹಿಂದೆ ಮುಂದೆ ತಿರುಗಿ ನೋಡಿದನು. ಸರ್ಪವು ಯಾವುದೋ ಪ್ರಾಣಿಯನ್ನು ನುಂಗಿ ಮರಕ್ಕೆ ಸುತ್ತಿಕೊಂಡಿದ್ದಿತು. ನಿದ್ದೆಯೋ ಏನೋ ಪಾಪ! ಭೋಜನಾನಂತರ! ಕಣ್ಣು ಮುಚ್ಚಿತ್ತು.

ಸೂರ್ಯನೇನೊ ನಡು ನೆತ್ತಿಯಲ್ಲಿ ನಿಂತಿದ್ದನು. ರಾಣೋಜಿಗೆ ಮನೆಯ ನೆನಪಾಯಿತು. ಸತ್ತ ಹಾವಿನ ಬಾಲವನ್ನುಕೈಗೆ ಸುತ್ತಿಕೊಂಡು ಹೊರಟನು. ಮತ್ತೆ ನಿಂತನು. ನೆಲದ ಮೇಲೆ ಎಳೆದು ತಲೆಯು ಕೆಟ್ಟುಹೋಗುವುದೆಂದು ಅದರ ಸುತ್ತ ಸೊಪ್ಪು ಸುತ್ತಿದನು—ಮತ್ತೆ ಹೊರಟನು. ಮನೆ ಸೇರುವ ಹೊತ್ತಿಗೆ ಹೊರಗೆ ಯಾರೂ ಇರಲಿಲ್ಲ. ಕಿಟಕಿಯ ಬಳಿಗೆ ಹೋದನು. ಹಾವಿನ ತಲೆಯನ್ನೆತ್ತಿ ಒಳಗೆಸೆದನು. ಕೋಣೆಯೊಳಕ್ಕೆ ಹೋಗಿ ಹಾವನ್ನು ಎಳೆದುಕೊಂಡನು. ಆ ಚಿಕ್ಕ ಕೋಣೆಯಲ್ಲಿ ಆ ಭಾರಿಯ ಘಟಸರ್ಪವು ಇಲ್ಲಿ ಹತ್ತಿ, ಅಲ್ಲಿಳಿದು, ಕೆಳಗೆ ಸುರುಳಿಯಾಗಿ, ಮೇಲೆ ಬಿಲ್ಲಾಗಿ ಸೋಫದ ಮೇಲೆ ಹೊಟ್ಟೆ ಇಟ್ಟು ಪುಟ್ಟ ಮೇಜಿನ ಮೇಲೆ ವಿವೇಕಾನಂದರ ಚಿತ್ರದ

ಮುಂಡೆ ಹಾಸಿ ಗಾಂಧಿಯವರ ಪ್ರತಿಮೆಯು ಹಿಂದಾಗಿ, ಪುಸ್ತಕ ಬೀರೂಬಳಿ ಬಂದು ಮೇಲೇರಿ ಕನ್ನಡ ಪುಸ್ತಕಗಳು ಇರುವ ಬಳಿ ಬಂದು **"ಯಮುನೆ ಸೋಲಿ"**ನ ಬಳಿ ಬಾಯಿ ತೆರೆದುಕೊಂಡಿತ್ತು. ಹೀಗೆಲ್ಲ ಅಲಂಕಾರವಾಡಿ ಅಲ್ಲಿ ನಿಂತು ಇಲ್ಲಿ ನಿಂತು, ಕಿಟಕಿಯ ಪರದೆ ತುಸಪಾಗಿ ಎಳೆದು—ಆನಂದದ ಚಿತ್ರವನ್ನು ನೋಡಿ ಹಿಗ್ಗಿ ಬಾಗಿಲೆಳೆದುಕೊಂಡು ಹೊರಟನು. ಇಂಥಾ ಸುಂದರವಾದ ಹಾವು ಎಲ್ಲಿಯೂ ಇದ್ದಿಲ್ಲ-ಮತ್ತ್ರೋ ಇದ್ದರೂ ಹೊಡೆದು ತರುವಂಥವರು ಯಾರಿದ್ದಾರೆ! ತಂದರೂ ಹೀಗೆಲ್ಲ ಅಲಂಕಾರವಾಗಿಟ್ಟು ತನ್ನ ಅರ್ಧಾಂಗಿಗೆ ತೋರಿಸಿ ನಲಿಯುವ ಭಾಗ್ಯ ಎಷ್ಟು ಮಂದಿಗೆ ಒದಗೀತು!

ಊಟವಾಯಿತು. ಮಾತುಕಥೆಯಲ್ಲಿ ಇಂಡಿಯ ಆಫ್ರಿಕಗಳು ಒಂದಕ್ಕೊಂದು ಹಣೆದುಕೊಂಡುಬಿಟ್ಟವು. ಮುಳ್ಳೈಯ್ಯನ ಗಿರಿ, ಕಿಲಿಮಾಂಜೀರೋ; ವಿಕ್ಟೋರಿಯಸರಸ್ಸು, ಅಯ್ಯನಕೆರೆ; ತಮ್ಮ ಜನ, ನೀಗ್ರೋ ಜನ ಮುಂತಾದ್ದೆಲ್ಲ ಬಂದು ನಿಂದು ಚಿತ್ರಿತವಾಗಿ, ಅಳಿಸಿಹೋದುವು. ಭೋಜನಸಮಯದ ಈ ಸಲ್ಲಾಪವು ನೀಗ್ರೋ ಚಂಚೂಗೆ ಕೊಂಚವೂ ಅರ್ಥವಾಗಲಿಲ್ಲ. ಹೊಟ್ಟೆ ತುಂಬಿಕೊಂಡರು ಇವರಿಬ್ಬರು ಎಂಬುದು ಮಾತ್ರ ಅರಿವಾಯಿತು.

ಪಂಜರದ ಮೃಗಪಕ್ಷಿಗಳ ಸಂಗಡ ಮಾತನಾಡಿದರು. ಉಷ್ಟ್ರಪಕ್ಷಿಯು ಬಂದು ಎಲ್ಲಮ್ಮನ ತರುಬಿನ ಹೂವನ್ನು ಕಿತ್ತುಕಿತ್ತು ನುಂಗಿತು. ಕಾಡುಮನುಷ್ಯ ಚಿಂಪಾಂಸೀ ಬಂದು ಹಕ್ಕಿಯನ್ನು ಓಡಿಸಿ ತಾನು ನಿಂತಿತು ಅವರಿಬ್ಬರ ನಡುವೆ. ಅವರಿಬ್ಬರ ಕೈಗಳನ್ನೂ ತೆಗೆದು ತನ್ನ ಒರಟು ಮುಖಕ್ಕೆ ಒತ್ತಿಕೊಂಡಿತು. ಅವರಿಬ್ಬರೂ ಕುರ್ಚಿಗಳ ಮೇಲೆ ಕುಳಿತುಕೊಂಡರು. ಕಾಡುಮನುಷ್ಯ ಸಡಗರದಿಂದ ಅತ್ತಿತ್ತ ಓಡಾಡಹತ್ತಿತು. ರಾಣೋಜಿಗೆ ಕೋಣೆಯ ನೆನಪು ಬಂತು. ಕಳಿಸಿ ನೋಡೋಣ ಹೆಂಡತಿಯನ್ನು ಆ ಬಳಿಗೆ ಎಂದುಕೊಂಡನು. "ಅದೇನು ಹೊಸ ಯೋಚನೆ" ಎಂದು ಇಂಗಿತವರಿತು ಆಕೆ ಕೇಳಿದಳು. "ಏನೂ ಇಲ್ಲ! ನಿನ್ನ ದನಿಯಲ್ಲಿ ಕನ್ನಡದ ಮೇಲಿನ ಆ ಹೊಸ ಹಾಡನ್ನು ಕೇಳಬೇಕೆನಿಸಹತ್ತಿದೆ—'ಮನವ ತಣಿಸುವ ಮೋಹನ'—ಹೇಳು, ಹೂ!" ಈ ಮಾತಿಗೆ ಎಲ್ಲಮ್ಮ "ನನಗೇನು ಅನ್ನಿಸಿದೆ ಬಲ್ಲಿರಾ? ನಿಮ್ಮ ನಾಲಿಗೆಯಲ್ಲಿ ಒಂದಿಷ್ಟು ಕನ್ನಡ ಓದಿಸಿ ಕೇಳಬೇಕೆಂದು." ರಾಣೋಜಿಗೆ ಅನುಕೂಲವಾಯಿತು—"ಆ ಮೇಲೆ ಹಾಡು ಹೇಳುವಿಯಂತೆ! ನಾನೇ

ಮೊದಲು ಓದಿಬಿಡುತ್ತೇನೆ. ತೆಗೆದುಕೊಂಡು ಬಾ. ಹಾಗ್ಗಾದರೆ ನಮ್ಮನಲವಿನ ಮಲೆನಾಡಿನಾತ ಬರೆದ ಪುಸ್ತಕ. ನಿನ್ನಂಥವಳು ಓದಬೇಕಾದ್ದು. ಹೊಸದಾಗಿ ಬಂದಿದೆ—'**ಯಮುನ ಸೋಲು**'—ನಾನೇ ಓದಿಹೇಳುವೆ."

"**ತಪಸ್ವಿನೀ!-ಬೇಡವೋ!**" ಎಂದುಕೊಂಡು ಎಲ್ಲಮ್ಮನು ಕೋಣೆಯ ಕಡೆ ನಡೆದಳು. ಜಡೆ ತೂಗಾಡಿತು. ಸೆರಗು ಹಾರಿಹಾರಿತು. ಕೈಬಳೆಗಳು ಥಳಥಳಿಸಿದವು. ಕಾಲುಂಗುರಗಳು ಮಾತಾಡಿದವು. ರಾಣೋಜಿಯು ಆತುರ ದಿಂದ ಆ ಕಡೆಯೇ ನೋಡುತ ಕುಳಿತನು. ಮರೆಯಾದಳು ಎಲ್ಲಮ್ಮ. ರಾಣೋಜಿಯು ಆಲೈಸುತ್ತ ಕುಳಿತ. ಬಾಗಿಲು ತೆರೆದ ಶಬ್ದ. ಇಷ್ಟು ಹೊತ್ತಿಗೆ ಒಳಕ್ಕೆ ಹೋಗಿರಬಹುದು. ಆಲೈಸಿದ ರಾಣೋಜಿ. ಇನ್ನೇನು ಕಿರುಚಿಕೊಳ್ಳುವಳು. ಆಗ ಕೂಗಿ ಹೇಳಬೇಕು—"ಸತ್ತ ಹಾವೆಂದು"—ಆ ಮೇಲೆ ಅವಳ ಪುಕ್ಕಲತನಕ್ಕೆ ಚಪ್ಪಾಳೆ ತಟ್ಟಿ ನಗಬೇಕು!

ಇಷ್ಟುಹೊತ್ತಿಗೆ ಎಲ್ಲಮ್ಮ ಕಿರುಚಿಕೊಂಡಳು. ಕುಳಿತಲ್ಲಿಂದಲೇ ರಾಣೋಜಿ ಕೂಗಿದನು "ಸತ್ತ ಹಾವು ಕಣೇ ಅದು, ಹೆದರಬೇಡ. ಪುಸ್ತಕ ವನ್ನು ಬೇಗನೇ ತೆಗೆದುಕೊಂಡು ಬಂದುಬಿಡು." ಇನ್ನೊಮ್ಮೆ ಕೂಗು! ದನಿಯು ಕಠೋರವಾಗಿತ್ತು. ನೆಲದ ಒಡಲಿಂದ ಬಂದಹಾಗಿತ್ತು. "ಸತ್ತ ಹಾವಿಗೆ ಹೆದರುವಿಯಾ! ಅಂಜುಬುರುಕಿ! ನಾನೇ ಬಂದೆ ಬಿಡು" ಹೀಗೆ ನ್ನುತ್ತ ಹೊರಟನು. ಮತ್ತೆ ಕೂಗು! ಈ ಬಾರಿ ಕುಗ್ಗಿದ ಕಂಠ, ಬಾಗಿಲ ಬಳಿ ಸೇರುವ ಹೊತ್ತಿಗೆ, ಇನ್ನೆರಡು ಮೂರು ಬಾರಿ ದೊಡ್ಡದಾಗಿ ನಿಟ್ಟು ಸಿರು ಬಿಟ್ಟ ಶಬ್ದ! ಈ ದಿನ ಬಹಳ ಅಂಜಿ ಬಿಟ್ಟಳೆಂದು ಎರಡು ಬಾಗಿಲೂ ತೆಗೆದನು. ಕಿಟಕಿಗಳನ್ನೆಲ್ಲಾ ತೆರೆದನು. ಹೆಂಡತಿಯ ಸುಳಿವಿಲ್ಲ. ಚಿಂಪಾಂಸೀ ಒಳಗೆ ಬಂತು. ರಾಣೋಜಿಯು ಚಂಚೂ ಕರೆದನು. ಉಳಿದ ಆಳುಗಳೆ ಲ್ಲರೂ ಓಡಿಬಂದರು. ಮೇಜಿನ ವಸ್ತ್ರ, ಸಿಂಹದ ತೊಗಲು, ಕರಡಿ ಚರ್ಮಗಳೆಲ್ಲವೂ ಸುರುಳಿ ಸುಪ್ಪಟ್ಟೆಯಾಗಿದ್ದವು. ಅಲ್ಲಲ್ಲಿ ರಕ್ತ ಚುಮುಕಿ ಸಿದ ಹಾಗಿತ್ತು. ಎಲ್ಲಮ್ಮ ಹೊರಗೆ ಹೋಗಿಲ್ಲ! ಒಳಗಂತೂ ಕಾಣಲಿಲ್ಲ! ಕೂಗಿದನು. ಗಾಬರಿಯಾದನು. ಪುಸ್ತಕಗಳನ್ನೆಲ್ಲಾ ಕಿತ್ತಾಡಿದನು. ಬೀರುವನ್ನು ಉರುಡಿಸಿದನು ಬುಡದಲ್ಲೇನೋ ಇತ್ತು. ಒಮ್ಮೆಲೆ ಹಾರಿ ಎಳೆದು ತೆಗೆದನು........ಎಲ್ಲಮ್ಮನ ದೇಹ! ರಕ್ತ ಸಿಕ್ತವಾಗಿದ್ದಿತು. ತಲೆ

ಯಾವುದೋ ಮುಖವಾವುದೋ ಕಾಣುವಂತಿರಲಿಲ್ಲ. ಗುರುತು ಕೂಡ ಅಳಿಸಿತ್ತು. ಅಂಥಾ ಅಂದವಾದ ಮೋರೆ ಅವಳದು, ಏನಾಗಿದ್ದೀತು !

* * *

ಕಾಡುಮನುಷ್ಯ ಏನನ್ನೊ ಹಿಡಿಸೆಳೆದುಕೊಂಡು ಬಂದಿತು. ಎಳೆಯ ಲಾರದು ಪಾಪ ! ಚಂಚೂ ಸಹಾಯಕ್ಕೆ ಹೋದನು. ಬೆಳಕಲ್ಲಿ ನೋಡಿದರೆ- ಎರಡು ಹೆಬ್ಬಾವುಗಳು ! ಒಂದಕ್ಕೊಂದು ಹೊಸೆದುಕೊಂಡಿವೆ ! ಒಂದಕ್ಕೆ ಜೀವವಿದೆ, ಇನ್ನೊಂದಕ್ಕೆ ಜೀವವಿಲ್ಲ. ಜೀವದ ಹಾವು ಸತ್ತ ಹಾವಿನ ಬಾಯೊಳಗೆ ತನ್ನ ಬಾಯಿಟ್ಟುಕೊಂಡಿವೆ ! ಕಿತ್ತೆಳೆದರೂ ತೆಗೆಯಲೊಲ್ಲದು. ಅದೇನು ಪ್ರಣಯ ! ಹಾವುಗಳಲ್ಲಿ ಕೂಡ ! ಕೊಂದ ಹಾವಿನ ಹೆಂಡತಿಯೆ ಅದು ! ಪ್ರಕೃತಿ ವೈಚಿತ್ರ್ಯ ಹೇಗಿದೆಯೋ ಬಲ್ಲರಾರು ! ಬಣ್ಣಿಸುವರಾರು ! ಮನುಜರ ಪ್ರಣಯ ಬರಿಮಾತು. ಪಕ್ಷಿಪ್ರಾಣಿಗಳ ಪ್ರಣಯವೇ ಶ್ರೇಷ್ಠ ವೆನಿಸದೆ ನಿಮಗೆ !

ಈ ಕಥೆಯನ್ನು ಹೇಳಿದವನು ರಾಣೋಜಿರಾಯ ! ನುಡಿನುಡಿಗಳನ್ನು ಕಣ್ಣೀರಲ್ಲಿ ನೆನೆನೆನೆಸಿ ನನ್ನ ಹೃದಯದಲ್ಲಿಟ್ಟನು. ಈಗೆ ನಮ್ಮ ನಾಡಿನಲ್ಲೇ ನೆಲೆಸಿರುವನು. ವಿದೇಶ ಗಮನ ದ್ರವ್ಯದಾಶೆಗೆ ! ಮೃಗ ಚರ್ಮ ಸಂಪಾ ದನೆ ಭಯ ನಿವಾರಣೆಗೆ, ಆಫ್ರಿಕದಲ್ಲಿ !

ಆಯಿತೆ ಭಯನಿವಾರಣೆ ?



# ೫. ಹಿಂತಿರುಗಿದ ಕೋತಿ

" ಕೋತಿಯಿಂದ ನಿಮಗಿನ್ನೆಂಥಾ ಭಾಗ್ಯ ! ನೀವು ಹೇಳುವ ಮಾತು ಸರಿ ! ಬಿಡಿ !! ತುಂಗಮ್ಮನವರೆ. ಇದೇನೆಂತ ಹೇಳುವಿರಿ! ಯಾರಾದರೂ ನಂಬುವ ಮಾತೇನರೀ ! ಕೋತೀಂತೀರಿ. ಬಹುಲಕ್ಷಣವಾಗಿತ್ತಿರಿ ಎಂತೀರಿ ! ಅದು ಹೇಗೋ ಏನೊ, ನಾನಂತೂ ನಂಬಲಾರನರೀ !" " ಹೀಗೆಂತ ನೆರ ಮನೆ ಪುಟ್ಟಮ್ಮನವರು ಹೇಳಿದರು."

"ನೀವು ಏನೇ ಹೇಳಿ ನನಗಂತೂ ಅದೇ ಭ್ರಮೆ! ಅದು ಪುನಹಾ ನಮ್ಮ ಮನೆಯಲ್ಲಿ ಬಾಲ ಎತ್ತಿಕೊಂಡು ಓಡಾಡ ಬೇಕು; ಹವ್ವಾ ಹವ್ವಾ! ಎಂತಕೂಗುತಿರಬೇಕು. ಆಗ ನಮಗೆ ಎಲ್ಲಾ ಸರಿ ಹೋಗಬೇಕು. ಅದು ಇದ್ದಾಗ ನಮಗೆ ಭಾಗ್ಯವಿತ್ತು; ಹಾಲು ತುಪ್ಪದಲ್ಲಿ ಕೈತೊಳೆದೆವು. ಅದು ಮತ್ತೆ ಬಂದರೇನೆ ನಮಗೆ ಭಾಗ್ಯ ಅಮ್ಮ!" ಹೀಗೆಂದು ತುಂಗಮ್ಮ ಹೇಳಿ ಸೆರಗಿನಿಂದ ಕಣ್ಣೊರಸಿಕೊಂಡರು.

" ಅಬ್ಬಾ! ಒಂದು ಕೋತಿಯನ್ನೇ ನೆನಸಿಕೊಂಡು ಕಣ್ಣು ಒದ್ದೆ ಮಾಡಿಕೊಂಡರಲ್ಲ, ಅದಿನ್ನೆಂಥಾ ಕೋತಿಯಮ್ಮ. ನನಗಂತೂ ಕೋತಿ ಮೋರೆ ನೋಡಿದರೆ ನಗು ಎಂದರೆ ನಗು. ತುಂಬಾ ನಗು. ಆ ಚಪ್ಪಟ್ಟೆ ಮೂಗೋ, ಆ ಮೈಯ್ಯೋ, ಆ ಬಾಲವೋ ಆ ಕೈಯ್ಯೋ ಆ ಕಾಲೋ! ಬಿಡೀಂದರೆ ತುಂಗಮ್ಮಾ! ಕಣ್ಣೀರು ಹಾಕಬೇಡಿ. ಮುತ್ತಿನಂಥಾ ಮಗು ಇದ್ದಾನೆ. ದೇವರು ಕಣ್ಣು ಬಿಟ್ಟರೆ ಇನ್ನೇನಮ್ಮ ನಾಲ್ಕಾರು ವರ್ಷ ಎಲ್ಲಾ ನೇರವಾಗಿರುತ್ತೆ. ನೀವು ಪರದೇಶಿಕೋತಿ ನೆನಸಿಕೊಂಡು ಸೀರೆ

ಸೆರಗೆಲ್ಲ ಒದ್ದೆಮಾಡಿಕೊಳ್ಳಬೇಡಿ! ಹನುಮಂತ ಎಂದರೆ ಏನೋ ಪರವಾಯಿಲ್ಲ. ರಾಮಭಕ್ತ! ಅವನು ಹೇಗಿದ್ದರೇನು. ಮಗುವಾಗಿದ್ದಾಗಲೇ ಸೂರ್ಯ-ಹಣ್ಣು ಕೆಂಪನೆ ಹಣ್ಣು-ಎಂತ ಹಾರಿದ್ದನಂತೆ! ಆಗ ಅವನೇನೋ ಮೋರೆ ಸೊಟ್ಟ ಆಗುವ ಹಾಗೆ ಹೊಡೆದುಬಿಟ್ಟನಂತೆ ಇಲ್ಲದಿದ್ದರೆ, ಆ ಅಂಜನಾದೇವಿಯ ಮಗ! ಆ ವಾಯುಪುತ್ರ! ಮಹಾರಾಯ ಸೀತಾಮ್ಮನವರ ಪಾಲಿಗೆ ಸಂಜೀವಿನೀ ರೂಪ! ಅವನು ಹೇಗಿದ್ದರೇನು ಅದೆಲ್ಲಾ ಒಪ್ಪೇ, ಆದರೆ ಆ ಮರಕೋತಿ, ಥೂ! ಏನು ನಾಚಿಕೆ ಕೇಡಿರೇ ತುಂಗಮ್ಮಾ! ಇದೇನು ಹೀಗೆ ಎಷ್ಟೊಂತ ಅಳುತೀರಿ, ಬಿಡೀಂದರೆ! ನಾನು ಹೊರಟೆ!" ಎಂತ ಬೇಸರಮಾಡಿಕೊಂಡು ನೆರಮನೆಯಾಕೆ ಹೊರಡುವುದರಲ್ಲಿದ್ದರು. ಆಗ ತುಂಗಮ್ಮ ಆಕೆಯ ಕೈ ಹಿಡಿದು ಕೂರಿಸಿ, ಹೀಗೆಂದು ಹೇಳಿದರು—"ಪುಟ್ಟಮ್ಮಾ! ಅದು ಕೋತಿಯಲ್ಲ ತಾಯಿ, ಅದು ನಮ್ಮ ಮನೆ ಮಗುವೆ ಆಗಿತ್ತು. ನಮ್ಮ ಶಿವರಂಜನ ಇದ್ದಾನಲ್ಲ ಅವನ ವಯಸ್ಸೇ ಅದಕ್ಕೆ. ಅದರ ಕೈ ಹಿಡಿದು ನೋಡಿದವರು ಹೇಳಿದ್ದಾರಮ್ಮ—ಅದರಿಂದಲೇ ನಮಗೆ ಭಾಗ್ಯವಂತೆ. ನೀವು ಹೇಳುವಹಾಗೆ ಚಪ್ಪಟಿಮೂಗಿನ ಕೋತಿ ನಿಜ. ಅದೇನೋ ಎಂತೋ ಅದು ಪುನಾಹಾ ಬರಬೇಕು ನಮ್ಮ ಮನೆಗೆ! ಆಗ ನಮಗೆಲ್ಲ ಆಗಬೇಕು ಸೌಖ್ಯ." ಹೀಗೆ ಹೇಳುತ್ತಿರುವಾಗಲೇ ಬಂದ—ಹಾರಾಡಿಕೊಂಡು ನಗುನಗುತ್ತ ಮನೆ ಮುದ್ದುಮೂರ್ತಿ—

**ಶಿವರಂಜನ!**

ನೆರಮನೆಯಾಕೆ ನಗುತ್ತ ಹೇಳಿದರು—"ಇವನು ನೋಡಿ ಅದರ ಹಾಗೆ ಇದ್ದಾನೆ. ಅದರ ನೆಗೆದಾಟವೆಲ್ಲ ಇವನಿಗೆ ಬಂದು ಬಿಟ್ಟಿದೆ. ಏನಪ್ಪ ನಿನ್ನ ಪರೀಕ್ಷೆ ಏನಾಯಿತು. ನಮಗೆಲ್ಲ ಏನು ಕೊಡುತ್ತೀಯಪ್ಪ. ಬೆಲ್ಲವೋ, ಸಕ್ಕರೆಯೋ, ಲಾಡು ಉಂಡೆಗಳೋ? ಏನು ಹೇಳಿಬಿಡು, ಕೇಳಿಕೊಂಡೇ ಹೋಗುತ್ತೇನೆ! ಏನಪ್ಪಾ?

ಆಗ ಶಿವರಂಜನ ಹೇಳಿದನು—"ನಿಮಗೆಲ್ಲಾ ಲಾಡು ಉಂಡೇನೇ ಕೊಡಬೇಕು. ನಾನು ಪರೀಕ್ಷೆಯಲ್ಲಿ, ಅಮ್ಮಾ ಹೇಳಲೇನಮ್ಮಾ?" ಎಂದು ಅಮ್ಮನ ಅಪ್ಪಣೆ ಪಡೆದು—"ನೋಡೀಂದರೆ, ನಾನು ಮೊದಲೇ ಹೇಳಿದ ಹಾಗೆ ಮೊದಲನೇ ತರಗತಿಯಲ್ಲಿ ಮೊದಲಾಗಿದ್ದೇನೆ! ಅಮ್ಮಾ ಎಲ್ಲರೂ

ಪೀಡಿಸುತ್ತಾರಮ್ಮ ತಿಂಡಿಕೊಡಿಸು ಎಂತ. ಏನುಮಾಡಲಮ್ಮಾ"—ಹೀಗೆಂತ ತಾನೂ ತನ್ನಮ್ಮನನ್ನು ಪೀಡಿಸತೊಡಗಿದನು.

ನೆರಮನೆಯಾಕೆ ಹೊರಟುಹೋಗಿದ್ದರು. ತಾಯಿ ತುಂಗಮ್ಮ ಶಿವನಿಗೆ ರಾಗಿ ಹುರಿಯಿಟ್ಟು ಕಲಸಿಕೊಟ್ಟರು. ಹುಡುಗ ಪರೀಕ್ಷೆಯಲ್ಲಿ ತೇರ್ಗಡೆಯಾದರೆ ಸಂತೋಷ, ದಿಟ. ಸಂತೋಷವನ್ನು ಹೇಗೆತಾನೇ ವರ್ಣಿಸುವುದು. ಇನ್ನು ಹೇಗೆ ಅದಕ್ಕೆ ಆಕಾರ ಕೊಡುವುದು. ಮನೆಯಲ್ಲಿ ಯಜಮಾನರೇ ಇಲ್ಲ. ಅವರು ಕಣ್ಣುಮುಚ್ಚಿಕೊಂಡು ಮೂರುವರ್ಷ ವಾಗಿದೆ. ಅಲ್ಪ ಸ್ವಲ್ಪ ಆಸ್ತಿಯೆಲ್ಲ ಕರಗುತ್ತ ಬಂದಿತ್ತು. ಒಂದು ಮನೆ ಅವರದಾಗಿ ಉಳಿದಿತ್ತು. ಅದರಲ್ಲಿ ಎರಡು ಭಾಗಮಾಡಿ ಒಂದನ್ನು ಬಾಡಿಗೆಗೆ ಕೊಟ್ಟು ಇನ್ನೊಂದರಲ್ಲಿ ಇವರಿಬ್ಬರೇ ಇದ್ದರು. ಈದಿನ ಆ ಮಗ ಶಿವರಂಜನ ಗೆದ್ದು ಬಂದಿದ್ದಾನೆ. ಆದರೆ ಇಷ್ಟರಲ್ಲೇ! ಆಯಿತೆ! ಇನ್ನು ಮುಂದೆ, ಪುಸ್ತಕ, ಪೋಷಾಕು, ಫೀಜು ಮುಂತಾಗಿ ಎಲ್ಲಾ ಆಗಬೇಕು. ಅವನಿನ್ನು ಓದಬೇಕು. ಅವನನ್ನು ಮುಂದೆ ಓದಿಸುವರಾರು? ಯಾರು ಆ ಭಾರ ವೆಲ್ಲ ಹೊರುವರು?—ಹೀಗೆಂದು ಯೋಚಿಸುತ್ತಿದ್ದಾಗ, ನೆರಮನೆಯಾಕೆ ಆ ಪುಟ್ಟಮ್ಮ ಬಂದಿದ್ದರು. ಅವರ ಸಂಗಡ ಮಾತಾಡುವಾಗ ಮನಸಿಗೆ ಹೊಳೆದಿತ್ತು ಆ ಕೋತಿಯ ನೆನಪು. ಅದಕ್ಕೇ ಅತ್ತಿದ್ದರು. ಶಿವರಂಜನ ಆಗಲೇ ಮನೆಗೆ ಬಂದಿದ್ದನು. ತಾಯಿಯ ಕಣ್ಣು ಒದ್ದೆಯಾದ್ದನ್ನು ನೋಡಿ ದ್ದನು? ಇಂಥಾ ನೆನಪನ್ನು ತಂದುಕೊಟ್ಟಿತಲ್ಲವೇ........

**ಆ ಕೋತಿ ಯಾವುದು?**

**ಅದು ಟಿಂ ಟಿಂ ಮ್ಯಾಣೀ!**

ಆ ಕೋತಿಯ ಹೆಸರನ್ನು ಕೇಳಿದನು. ಶಿವನಿಗೂ ಅದರ ನೆನಪು ಅಲ್ಪ ಸ್ವಲ್ಪ ಹೊಳೆದು ಬಂದಿತು. ಅದರ ಕತೆಯನ್ನು ಆ ರಾತ್ರಿ ಶಿವರಂಜನ ತನ್ನ ತಾಯಿಯ ಬಾಯಿಂದ ಕೇಳಿದನು. ಕೇಳುತ್ತಾ ಕೇಳುತ್ತಾ ತೂಕಡಿಸಿ ರೆಪ್ಪೆ ಮುಚ್ಚಿ ದಿಂಬಿಗೆ ವರಗಿದನು.

**ಅದೇ, ಇದು!**

## ಹಿಂತಿರುಗಿದ ಕೋತಿ

ಹದಿನಾರು ವರ್ಷಗಳ ಹಿಂದೆ ಶಿವನ ತಂದೆ ಕಟ್ಟೇ ಹಳ್ಳದ ಕಡೆಗೆ

ತಿರುಗಾಡುತ್ತ ಹೋಗಿದ್ದರು. ಆದಿನ ಮಹಾ ಮಳೆ ಒಂದು ಆಗತಾನೆ ಮೋಡ ಬಿಳುಪಾಗಿ ಮಳೆ ನಿಂತಿತ್ತು ನೀರು ಹನಿಗಳು ಮರದೆಲೆಗಳಿಂದ ತೊಟಕುತ್ತಿದ್ದವು. ಮಿಂಚು ಆಡುತ್ತಲೇ ಇತ್ತು. ಕಟ್ಟೇ ಹಳ್ಳದ ನೀರು ಕೆಂಪಗೆ ಓಕುಳಿಯ ಹಾಗೆ ಇತ್ತು! ಅದರ ಪ್ರವಾಹ ವೇಗವಾಗಿತ್ತು. ಅಲ್ಲಲ್ಲಿ ಸುಳಿಗಳಿದ್ದವು. ನೀರಿನಮೇಲೆ ಬುಟ್ಟಿ, ಚಾಪೆ, ತೊಟ್ಟಿಲು ಎಂತ ಹಳ್ಳಿಯ ಜನರ ಸಾಮಾನೇನೇನೆಲ್ಲ ತೇಲಿ, ತೇಲಿ ತಿರುಗಿ ತಿರುಗಿ ಮುಳು ಗೇಳುತ್ತ ಹೋಗುತ್ತಿದ್ದವು. ಗುಡಾರ್, ಗುಡಾರ್ ಎಂತ ಗುಡುಗಿನ ಆರ್ಭಟ! ಧಡಾರ್, ಧಡಾರ್ ಎಂತ ಕಸಿದು ಬೀಳುವ ದಡದ ಶಬ್ದದ ಸಂಗಡ, ಮಿಂಚು ಥಳ, ಥಳಾರೆನ್ನುವಾಗ ಗಾಳಿ ಸೂಂಯ್, ಸೂಂಯ್ ಎನ್ನುತ್ತಿತ್ತು. ಒಮ್ಮೊಮ್ಮೆ ಗಾಳಿ ರುಮ್ಮೆಂದು ಬೀಸಿದಾಗ ಮರಗಳ ಎಲೆ ಗಳಿಂದ ಟುಪುರು ಟುಪುರೆಂದು ಹನಿಗಳು ಬೀಳುತ್ತಿದ್ದವು. ಶಿವನ ತಂದೆ ಮುಂದೆ ಮುಂದೆ ಹೋದಾಗ ಮಬ್ಬುಗತ್ತಲೆಯಲ್ಲಿ 'ಕಿರ್ರೋ, ! ಕಿರ್ರೋ!' ಎಂದು ಕಿರುಚಿದ ಸದ್ದು ಕೇಳಿಸಿತು. ಕಿವಿಯನ್ನೇ ಕೊರೆಯುವಂತಿದ್ದ ಆ ಸದ್ದನ್ನು ಕೇಳಿದವರು, ಅಲ್ಲೇ ನಿಂತರು. ಸುತ್ತ ನೋಡಿದರು. ನೀರಿನ ಬಳಿಯಲ್ಲ ಈಚೆ ಕರೆಯಲ್ಲಿ ಒಂದು ತಾಳೆಯ ಪೊದೆ. ಅದರೊಳಗಿಂದ ಆಶಬ್ದ ಬರುತ್ತಿತ್ತು. ನೀರು ಏರುತ್ತಿತ್ತು. ಶಿವನ ತಂದೆ ಅಲ್ಲಿಗೆ ಹೋಗಿ ಮುಳ್ಳಿನ ಪಂಜರದಿಂದ ಒಂದು ಸಣ್ಣ ಪ್ರಾಣಿಯನ್ನು ಬಿಡಿಸಿ ತೆಗೆದರು. ಅದು ಇವರ ಕೈಗೆ ತನ್ನ ಕೈಕಾಲುಗಳನ್ನು ಬಿಗಿದು ಬಾಲವನ್ನು ಸುತ್ತಿ ಅಂಟಿಕೊಂಡಿತು. ಅದರ ಮೈಯೆಲ್ಲ ಕೆಂಪಗಿತ್ತು. ಮೋರೆಯಲ್ಲಿ ಮನುಷ್ಯರ ಮಗುವನ್ನು ಹೋಲುವ ಹಾಗಿತ್ತು. ಅದನ್ನು ಎತ್ತಿ ಪಂಚೆಯತುದಿಯಲ್ಲಿ ವರಸಿ ಕೈ ಚೌಕದಲ್ಲಿ ಸುತ್ತಿದರು, ಪಾಪ ಮಂಗನ ಮರಿ ತಬ್ಬಲಿಯಾಗಿ ಬಿಟ್ಟಿದೆ. ಎಂದುಕೊಂಡರು. ಕೈ ಚೌಕವೂ ಒದ್ದೆಯಾಯಿತು. ಕನಿಕರ ಬಟ್ಟು ಅದನ್ನು ಆ ಚೌಕದಿಂದ ಬಿಡಿಸಿ ಬಿಟ್ಟು ಅಂಗಿಯ ಜೇಬಿನವಳಗೆ ಇಟ್ಟುಕೊಂಡರು. ಅದರ ಮೇಲೆ ಮರೆಯಾಗಿ ತಮ್ಮ ಹಸ್ತವನ್ನು ಇಟ್ಟು ಕೊಂಡು ಮನೆಗೆ ಬಂದರು.

ಅಂತು ಮನೆಗೊಂದು ವಾನರ ಶಿಶು ಬಂದಿತು. ಅದೇ ದಿವಸ ಅದೇ ಮನೆಯಲ್ಲಿ ಒಂದು ನರಶಿಶುವೂ ಅವತರಿಸಿತು. ಇದು ಕಟ್ಟೇಹಳ್ಳದಿಂದ

ಕಾಡಿನ ಕೂಸಾಗಿ ಅಲ್ಲಿತೇಲಿ ಬಂದಿತ್ತು. ಅದು ತಾಯಿಯ ಮಡಿಲಿಂದ ಸಂಸಾರದ ಮೊಗ್ಗಾಗಿ ಅರಳಿ ಬಂದಿತ್ತು.

ಮನೆಯ ತಂದೆಯೇ ವಾನರಶಿಶುವಿಗೆ ತಾಯಿಯಾದರು, ಅವರೇ ಅದರ ಬಾಯಿಗೆ ಹಾಲಿನ ಬತ್ತಿಯಿಟ್ಟು ಸಾಕಿದರು. ಯಜಮಾನತಿಯು ಎದೆಯ ಹಾಲೆರದು ನರಶಿಶುವಿಗೆ ತಾಯಿಯಾಗಿದ್ದರು. ಇದಕ್ಕೆ ತಿಂಮಣ್ಣ ಎಂದು ಹೆಸರಾಯಿತು. ಅದಕ್ಕೆ ಶಿವರಂಜನ ಎಂದು ನಾಮಕರಣ ವಾಯಿತು. ಶಿವನ ತಂದೆ ಈ ಕೋತಿಗೆ ಇನ್ನೂ ಗಂಭೀರವಾದ ಹೆಸರನ್ನಿಡ ಬೇಕೆಂದಿದ್ದರು. ಅದೇನೆಂದರೆ "ರಾಂ ರಜನ್!" ಯಜಮಾನತಿಯು ಆ ಹೆಸರು ಕೇಳಿ ನಕ್ಕುಬಿಟ್ಟಾರೆಂದು ಹೆದರಿ ಇವರು ಅದಕ್ಕೆ ತಿಂಮಣ್ಣನೆಂದೇ ಕರೆಯುತ್ತ ಬಂದರು. ಆದರೂ ಅದಕ್ಕೆ ಅಂಗಿ ಟೋಪಿ ಹೊಲಿಸದೆ ಬಿಡಲಿಲ್ಲ.

ತಿಂಮಣ್ಣ ಹಜಾರದಲ್ಲಿ ಗೋಣಿ ಚೀಲದಲ್ಲಿ ಹೊಕ್ಕು ತೂಕಡಿಸುತ್ತ ಕಾಲ ಕಳೆಯುತ್ತಿತ್ತು. ರಾತ್ರಿಯೆಲ್ಲ ಎಚ್ಚರವಾಗಿರುತ್ತಿತ್ತು. ಯಾವಾಗ ಕೂಗಿದರೂ ಗುರ್ ಗುರ್ ಎನ್ನುವುದು. ಬಹಳ ಹುಷಾರಿ! ಮೊದ ಮೊದಲು ಸಣ್ಣಕೋತಿಯಾಟವಾಡಿತು. ಒಂದೆರಡು ವರ್ಷಗಳ ನಂತರ ದೊಡ್ಡ ಕೋತಿಯ ಚೇಷ್ಟೆಗಾರಂಭಮಾಡಿತು. ಮೊದಲು ಮನೆಬಿಟ್ಟು ಯಜಮಾನರ ಹೆಗಲು ಬಿಟ್ಟು ಹೋಗುತ್ತಿರಲಿಲ್ಲ. ಕಡೆ ಕಡೆಗೆ ಎಲ್ಲರ ಸೂರು ಮೇಲೂ ತಿಂಮಣ್ಣ ಎಲ್ಲರ ಹೆಗಲುಮೇಲೂ ತಿಂಮಣ್ಣ, ನಕ್ಕವ ರನ್ನೂ ಹೆದರದವರನ್ನೂ ಏನೇನೂ ಮಾಡದಿದ್ದು! ಅತ್ತವರನ್ನೂ ಅಂಜಿ ದವರನ್ನೂ ಕಚ್ಚಿ ಕಡಗುಳಿಮಾಡಿ ಪರಚಿ, ಅವರ ಬಟ್ಟೆ ಹರಿದುಬಿಡು ತ್ತಿತ್ತು. ಇದರ ಹಾವಳಿ ಹೆಚ್ಚಾಯಿತು. ಆದುದರಿಂದ ತಿಂಮಣ್ಣನ ನಡುವಿಗೆ ಚರ್ಮದ ಪಟ್ಟಿಯೂ ಕಬ್ಬಿಣದ ಸರಪಳಿಯೂ ಬಂದು ಬಲವಾಗಿ ನಿಂತವು. ಹಜಾರದ ಕಂಬಕ್ಕೆ ಕಟ್ಟುಬಿಟ್ಟುದ್ದಾಯಿತು. ಹೀಗಾದರೂ ಆ ಕೋತಿಗೆ ಮನೆಯ ಮಗುವನ್ನು ಕಂಡರೆ ಬಲು ಅಕ್ಕರೆ. ತಿಂಮಣ್ಣ ಶಿವರಂಜನನನ್ನು ಕೂರಿಸಿಕೊಂಡು ಕಿಚ, ಕಿಚ ಎನ್ನುತ್ತಾ ಎಷ್ಟು ಹೊತ್ತು ಬೇಕಾದರೂ ಕೂತಿರುತ್ತಿತ್ತು. ತನ್ನ ಬಾಯಿಚೀಲಗಳಿಂದ ತಿಂಡಿ ತೆಗೆದು

ಮಗುವಿಗೆ ಕೊಡುತ್ತಿತ್ತು. ಶಿವನ ತಾಯಿ ಕೆಲಸದಮೇಲಿದ್ದಾಗ, ಮುಂಬಾಗಿಲು ಅಗುಳಿಹಾಕಿ ಹಾರ್ಮೋನಿಯಂ, ಚಂಡು, ತಿಂಡಿ ಬೊಂಬೆಗಳನ್ನು ಮುಂದೆ ಇಟ್ಟು ಹೊರಟುಹೋಗುತ್ತಿದ್ದರು. ಶಿವರಂಜನಿಗೆ ಆಗ್ಗೆ ಸುಮಾರು ಮೂರುವರ್ಷ ಕೋತಿಗೂ ಅಷ್ಟೇ ವಯಸ್ಸು. ಆದರೂ ತಿಮ್ಮಣ್ಣ ಏನೇನೆಲ್ಲ ಮಾಡುತ್ತಿತ್ತು ಹೇಗೇಗೆಲ್ಲ ಮಗುವನ್ನು ಆಡಿಸುತ್ತಿತ್ತೋ ಬಲ್ಲವರಾರು? ಕೆಲಸದ ಗದ್ದಲದಲ್ಲಿ ಶಿವನ ತಾಯಿ ಅದೆಲ್ಲ ನೋಡುತ್ತಿರಲಿಲ್ಲ. ಮಗುವಂತು ಸುಮ್ಮನೆ ಇದ್ದರೆ ಅವರಿಗೆ ಸಾಕಾಗಿತ್ತು.

ಹೀಗಿದ್ದಾಗ ಒಂದುದಿನ ಶಿವನತಂದೆ ಊಟಮಾಡಿ ಕುಳಿತರು. ತಿಂಮಣ್ಣನನ್ನು ಸರಪಳಿಬಿಚ್ಚಿ ತಂದರು. “ ಹಾರ್ಮೋನಿಯಂ ಒತ್ತುಮಗು ” ಎಂದರು. ಮಗು ಬರುವುದಕ್ಕೆ ಮುಂಚಿತವಾಗಿ ತಿಂಮಣ್ಣನೇ ಮುಂದೆ ಬಂದು ಆ ಹಾರ್ಮೋನಿಯಂನ್ನು ಒತ್ತಿತು. ಅವರಿಗೆ ಆಶ್ಚರ್ಯವಾಯಿತು. “ ಇನ್ನೇನೆಲ್ಲ ಬರುತ್ತೆ “ ರಾಂ ರರ್ಜ ” ಎಂದು ಹಾರ್ಮೋನಿಯಮ್ಮಿನ ಮುಂಭಾಗದಲ್ಲಿ ಕೂರಿಸಿದರು. ಆಗ ರಾಂರಾರ್ಜ ಒಂದೆರಡು ಮನೆ ಒತ್ತಿತು. ಆ ಶಬ್ದವನ್ನು ಕೇಳಿ ಮಗು ಶಿವರಂಜನನೂ ನಕ್ಕು ಚಪ್ಪಾಳೆತಟ್ಟಿ ಕುಣಿಯಿತು. ಅಂದಿನಿಂದ ಶಿವನತಂದೆ ಆ ಕೋತಿಗೆ ಸರ್ಕಸಿನಾಟಗಳನ್ನೆಲ್ಲ ಕಲಿಸಿದರು. ಹರಿಶ್ಚಂದ್ರ ನಾಟಕದಲ್ಲಿ ಅವರೂ ಒಂದು ವೇಶ ಹಾಕಿ ಆ ಕೋತಿಯನ್ನು ಹಿಡಿದುಕೊಂಡು ಹೋಗಿ ಅದನ್ನು ಕುಣಿಸಿ ಎಲ್ಲರನ್ನೂ ನಗಿಸಿದರು. ಕೋತಿ ತಿಂಮಣ್ಣನು ಆ ಊರಿಗೆಲ್ಲ ಹೆಸರುವಾಸಿಯಾಯಿತು. ಮಗು ಶಿವರಂಜನನು ಅದನ್ನು ಹೊಸ ಹೆಸರಿನಿಂದ, ಕರೆಯಲಾರಂಭಿಸಿದನು. ಆ ಹೊಸ ಹೆಸರೇ— ಟಿಂ, ಟಿಂ ಮ್ಯಾಣೀ !—

ಆ ಹೆಸರನ್ನು ಆ ಮಗುವಿನ ಬಾಯಲ್ಲಿ ಕೇಳಿ ಆ ಕೋತಿ ನೆಗೆದಾಡಿ ಕಿಚ ಕಿಚಗುಟ್ಟುತ್ತಿತ್ತು ಆ ಮಗುವನ್ನು ತಬ್ಬಿಕೊಂಡು ಕುಳಿತುಬಿಡುತ್ತಿತ್ತು.

ಟಿಂ, ಟಿಂ ಮ್ಯಾಣೀ—ಎಂಬುದೇ ಮಗುವು ಕೋತಿಗೆ ಇಟ್ಟ ಹೆಸರು. ಅದೇ ವಶೀಕರಣ ಮಂತ್ರವಾಯಿತು.

ಹೀಗೆಯೇ ಇರುತ್ತವೆಯೇ ಶುಭ ದಿವಸಗಳು ? ಇಲ್ಲವಲ್ಲ ! ಒಂದು ಬಲು ಕೆಟ್ಟದಿವಸ, ಬಲು ಕೆಟ್ಟಗಳಿಗೆಯಲ್ಲಿ ಟಿಂ ಟಿಂ ಮ್ಯಾಣಿಯು ಹಜಾ

ರದ ಕಂಬಕ್ಕೆ ಕಟ್ಟಿದ್ದ ಸರಪಳಿಯನ್ನು ನುಲಿಚಿ, ತಿರಿಚಿ ಕೊಂಡಿಯನ್ನೇ ಕಳಚಿಕೊಂಡು ಹೊರಹೊರಟಿತು. ನಾಲ್ಕು ವಯಸ್ಸಿನ ಕೋತಿ ಎಲ್ಲರ ಕಣ್ಣಿಗೂ ಗಡವ ಕೋತಿಯಾಗಿ ಪುಟ್ಟ ರಾಕ್ಷಸನಹಾಗೆ' ಇತ್ತು. ಅದು ಎಲ್ಲ ಕಣ್ಣಿಗೂ ಭಯಹುಟ್ಟಿಸಿತು. ಆ ಕೋತಿಗೋ ಇಡಿಯ ಊರೆಲ್ಲ ಲಂಕಾಪಟ್ಟಣದಂತೆ ಕಂಡಿರಬೇಕು. ಇಲ್ಲದಿದರೆ ಅಷ್ಟು ಹಾವಳಿಮಾಡು ತ್ತಿತ್ತೆ ? ಶಾನುಭೋಗರ ಮನೆಯ ಕುಂಬಳ ಬಳ್ಳಿಯೆಲ್ಲ ಹಾಳು. ಶೇಕದಾರ್ರ ಮನೆಯ ಶೀರೆಗಳೆಲ್ಲ ಹರಿದು ಚಿಂದಿಚಿಂದಿ. ಅಮಲ್ದಾರಮನೆ ಮುದ್ದು ಮಗಳ ಪರಿಕಾರವೆಲ್ಲ ಹರಿದು ಗೀಳಿಹೋಗಿತ್ತು. ಪಟ್ಟಣದ ಶೆಟ್ಟರ ಮಗನ ಮೋರೆಯೆಲ್ಲ ಗೀರುಬಾರಾಗಿ ಸೋರುತ್ತಿತ್ತು. ಅದೊಂದು ಕೆಟ್ಟಾನು. ಕೆಟ್ಟದಿನ. ಕೆಟ್ಟಾನು ಕೆಟ್ಟಗಳಿಗೆ ! ಕೋತಿಯದೇನು ತಪ್ಪು.

ಅಂತು ಆದಿನ ಊರಲ್ಲೆಲ್ಲ ಗದ್ದಲ !—ಹಾಳು ಕೋತಿ ! ಕೋತಿ ಸಾಕಿದವರು ಹಾಳಾದವರು. ಹುಚ್ಚು ಕೋತಿ ! ಹೀಗೆಂದು ಕೂಗು ಎಲ್ಲೆಲ್ಲೂ ಕೇಳಿಸಿತು. ಟಿಂ ಟಿಂ ಮ್ಯಾಣಿ ಯಾರ ಕೈಗೂ ಸಿಕ್ಕಲಿಲ್ಲ. ಎಲ್ಲೆಲ್ಲೂ ಹಾವಳಿಮಾಡಿ ಎಲ್ಲೋ ಮಾಯವಾಗಿಬಿಟ್ಟಿತು.

ಆದರೆ ನೊಂದವರೆಲ್ಲ ಬಿಡುತ್ತಾರೆಯೆ ? ಅವರೆಲ್ಲ ಸಾಲುಸಾಲಾಗಿ ಶಿವರಂಜನನ ಮನೆಗೆ ಬಂದರು. ಅವರನ್ನೆಲ್ಲ ನೋಡಿ ಶಿವರಂಜನ ಚಪ್ಪಾಳೆ ತಟ್ಟಿ ನಕ್ಕುಬಿಟ್ಟನು. ಅವನತಾಯಿಗೆ ಅವರಿಗೆಲ್ಲ ಸಮಾಧಾನಮಾಡಿ ಉತ್ತರ ಹೇಳಿ ಹೇಳಿ ಸಾಕಾಯಿತು. ಹಿಂದೆ ಗೋಪಾಲಬಾಲನು ಗೊಲ್ಲ ಗೇರಿಯಲ್ಲಿ ಅಷ್ಟೊಂದು ಹಾವಳಿ ಎಬ್ಬಿಸಿ ದೂರು ತಂದಿರಲಿಲ್ಲ. ಅಷ್ಟೊಂದು ದೂರು ಈಗ ಈ ಮಂಗನ ಹಾವಳಿಯಿಂದ ಬಂದಿತ್ತು. ಆದರೆ ಏನು ಮಾಡುತ್ತಾರೆ. ಹಿಡಿಯೋಣವೆಂದರೆ ಕೋತಿ ಎಲ್ಲೂ ಕಾಣಿಸಲಿಲ್ಲ. ಶಿವನ ತಂದೆ ಮನೆಗೆ ಬಂದರು. ಅವರು ರೇಗುತ್ತಲೇ ಬಂದರು—ತಾವು ಜಲಕಂಟಕದಿಂದ ತಪ್ಪಿಸಿತಂದು, ಮನೆ ಮಗುವಿಗಿಂತ ಹೆಚ್ಚೆಂದು ತಿಂಡಿ ಬಟ್ಟೆ ಕೊಟ್ಟು ಒದ್ದಾಡಿ ಕಾಪಾಡಿದ್ದಕ್ಕೆ ಕೊನೆಗೂ ಹೀಗೆ ಮಾಡಬಹುದೇ ! ಅಮಲ್ದಾರರು ಮುನಿಯಬೇಕೆ, ಪಟ್ಟಣದ ಶೆಟ್ಟರು ಶಿಟ್ಟಾಗಬೇಕೆ ! ಇರಲಿ ಅದರನ್ನು ಮೊದಲು ಮಗುವಿನ ಕೈಯ್ಯಿಂದಲಾದರೂ ಹಿಡಿಸಿ ಆಮೇಲೆ ಬುದ್ಧಿ ಕಲಿಸುತ್ತೇನೆ—ಹೀಗೆಂದು ತಮ್ಮ ನರಶಿಶುವನ್ನು ಕರೆದುಕೊಂಡು

ಹೊರಗೆ ಹೋದರು. ಟಿಂ ಟಿಂ ಪ್ರಾಣಿಯು ಮನೆಯ ಸೂರಿನ ಮೇಲೆ ಬಂದು ಕೂತಿತ್ತು. ಮಗು ಶಿಶುವನ್ನು ಬಿಟ್ಟ ಕೂಡಲೇ ಅದು ಹಾರಿ ಬಂದು ಅವನ ಕಾಲುಗಳನ್ನು ತಬ್ಬಿಕೊಂಡು ಕಿಚ-ಕಿಚಗುಟ್ಟುತ್ತಾ ಕುಳಿತು ಬಿಟ್ಟಿತು.

ಸ್ವಲ್ಪಕಾಲ ಶಿವರಂಜನ ತಂದೆಗೆ ಇದನ್ನೆಲ್ಲ ಕೇಳಿ ರೇಗಿಹೋಯಿತು. ತಾವು ಜಲಕಂಠಕದಿಂದ ತಪ್ಪಿಸಿ ತಂದು ಮನೆ ಮಗುವಿಗಿಂತಾ ಹೆಚ್ಚಾಗಿ ಸಾಕಿದ್ದಕ್ಕೆ ಇದೇ ಪ್ರತಿಫಲ ಹುಡುಕಿ ಅವರೇ ಅದನ್ನು ಹಿಡಿದು ಹಿಂಗಟ್ಟು ಮುರಿ ಕಟ್ಟಿ ಹಜಾರದಲ್ಲಿ ಉರುಡಿಕೆಡವಿದರು. ಅನಂತರ ರೇಗಾಡಿ ಕೂಗಾಡಿ ಸ್ವಲ್ಪ ಶಾಂತಿ ಪಡೆಯುವುದಕ್ಕಾಗಿ ಬೀದಿಗೆ ಹೋದರು. ಅಲ್ಲಿ ಮತ್ತೆ ಯಾರೋ ಬಂದರು. ಅವರು ಅವರ ಹತ್ತಿರ ನಿಂತು ಬೀದಿಯಲ್ಲಿ ಮಾತಾ ಡುತ್ತಿದ್ದಾಗ ಇತ್ತ ಒಳಗೆ ಮನೆಯಜಮಾನಿ ತುಂಗಮ್ಮ ಅಳುತ್ತ ಕೋತಿಯ ಹತ್ತಿರ ಬಂದರು. ಅದು ಕೋತಿಯ ಭಾಷೆಯಲ್ಲಿ ಬೇಡುವಹಾಗೆ "ಹಮ್ಮಾ ಆ, ಆ ಹಮ್ಮಾ, ಆ, ಆ,! ಎಂತ ಕೂಗಿ ಕಿಚ ಕಿಚ ಗುಟ್ಟಿತು. ತಡೆಯ ಲಾರದೆ ತುಂಗಮ್ಮನವರು ಆ ಕೋತಿಯ ಕೈಗಳನ್ನು ಹಗ್ಗದ ಕುಣಿಕೆ ಯಿಂದ ಬಿಡಿಸುತ್ತಿದ್ದಾಗ ಶಿವನ ತಂದೆ ಮನೆಯೊಳಕ್ಕೆ ಬಂದರು. "ಹಾಳು ಕೋತಿಯ ರಾಮಾಯಣ! ನಾನೇ ತಾಯಾಗಿ ಸಾಕಿ ಸಲಹಿದ ತಬ್ಬಲಿ ಪ್ರಾಣಿ ಹೀಗೆ ಮಾಡಬಹುದೇ ? ಈದಿನ ಅದರ ಋಣಾನುಭಂಧ ಹರಿಯಿತು ಬಿಡು! ನನ್ನ ಕೈಯನ್ನೇ ಕಚ್ಚಿಬಿಟ್ಟದೆ. ಅದಕ್ಕೆ ಸ್ವಲ್ಪವೂ ಕರುಣೆ ತೋರಿಸಬೇಡ. ಹೀಗೆಂದು ರೇಗಿ ಕೂಗಾಡುವಾಗ, ಆಕೋತಿ ಹೀಗೆ ಹಾಗೆ ಹೊಸಕಾಡಿ ತೆವಳಿಕೊಂಡು ಅವರ ಕಾಲ ಬಳಿಗೆ ಹೋಗಿ ಕಿಚ, ಕಿಚ ಗುಟ್ಟಿ "ಹಪ್ಪಾ ಆ, ಆ, ಹಪ್ಪಾ, ಆ, ಆ!" ಎಂದಿತು. ಅನಂತರ ಅದರ ದವಡೆ ಚೀಲದಿಂದ ಒಂದು ಹೊಸ ರೂಪಾಯನ್ನು ತೆಗೆದು ಬಂದು ಕೈನೀಡಿ ಕೊಡ ಹೋಯಿತು. ನಿಲ್ಲಲಾರದೇ ನಿಂತಿತ್ತು. ಹಸ್ತದ ತುದಿ ಯಲ್ಲಿತ್ತು ಅದರ ಅಪರಾಧ ಕಾಣಿಕೆ.

ಆಗ ಗಂಡ ಹೆಂಡಿರಿಬ್ಬರೂ ಆ ಕೋತಿಯ ಹೊಸ ಆಟವನ್ನು ನೋಡಿ ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತು ಬಿಟ್ಟರು. ಅದರ ಬುದ್ಧಿ ನೋಡಿ ಅವರಿಗೆ ಮರುಕ ಹುಟ್ಟಿತು. ಆದರೂ ಆ ಹೀನಾಯದ ಶೇಕದಾರನ ಶಿಟ್ಟು ಅಸಾ

ದ್ಯವಾಗಿತ್ತಲ್ಲವೆ ?—"ಅದು ಹುಚ್ಚು ಹಿಡಿದ ಕೋತಿ ಅದನ್ನು ಊರಾಚೆ ತೊಲಗಿಸಿ "—ಎಂದವರ ಅಪ್ಪಣೆಯಾಗಿತ್ತಲ್ಲವೆ? ಇನ್ನೇನು ಟಿಂ ಟಿಂ ಪ್ರಾಣಿಯು ಮನೆಬಿಟ್ಟ ಕೂಸೇ ಆದಂತೆ! ಇದುವರೆಗೆ ತಬ್ಬಲಿಯಾಗಿದ್ದ ಕೋತಿಯು ಈಗ ಪರದೇಶಿಯಾಗಿ ಬಿಡುತ್ತದೆ!

ಆದೇ ದಿನ ನೆರೆ ಊರಿನ ಜೋಯಿಸರೊಬ್ಬರು ಅವರಮನೆಗೆ ಮಧ್ಯಾಹ್ನದ ಊಟಕ್ಕೆ ಬಂದರು. ಊಟಕ್ಕೆ, ಕುಳಿತಿದ್ದಾಗ ಈಕೋತಿ ಬಹುವಾಗಿ "ಹವ್ವಾ ಹವ್ವಾ"—ಎಂದು ಕೂಗಲಾರಂಭಿಸಿತು. ಶಿವನ ತಾಯಿ ಅದನ್ನು ಬಿಚ್ಚಿ ತಂದರು. ಅದು ಎಲೆಯ ಮುಂದೆ ಬಂದು ಕೈನೀಡಿತು. ಜೋಯಿಸರು—" ಏನಯ್ಯಾ ತಿಮ್ಮಪ್ಪಾ, ಏ ತಿರುಪತಿ ತಿಮ್ಮಪ್ಪಾ! ನಿನ್ನ ಕೈಭಾಗ್ಯ ಚನ್ನಾಗಿದೆಯಲ್ಲೋ! ನನ್ನ ಹತ್ತಿರವೇ ತಿರುಪೆ ಬೇಡುವೆಯಾ? ಹಾಗಾದರೆ ಹಿಡಿಯಪ್ಪ ಹಿಡಿ—" ಎಂದು ಒಂದು ತುತ್ತು ಮೊಸರನ್ನ ಇಟ್ಟರು. ಕೋತಿಯು ಅದನ್ನು ದವಡೆ ಚೀಲಕ್ಕೆ ತುಂಬಿಕೊಂಡು ಮತ್ತೆ ಕೈನೀಡಿದಾಗ— "ಇದೇನು ತಿಮ್ಮಣ್ಣಾ! ನೀನೇ ಅನ್ನದಾನ ಮಾಡೋದು ಬಿಟ್ಟು ನನ್ನೇ ಬೇಡುತೀಯಲ್ಲೋ" ಎಂದು ನಗುತ್ತ ಇನ್ನೂ ಒಂದೆರಡು ತುತ್ತು ಅನ್ನ ಕೊಟ್ಟರು.

ಊಟವಾದಮೇಲೆ ಯಜಮಾನರೂ ಜೋಯಿಸರೂ ಎಲೆ ಅಡಿಕೆ ಹಾಕುವಾಗ ತಿಮ್ಮಣ್ಣ ಬಂದು ಕೂತಿತ್ತು. ಆ ವೇಳೆಗೆ ಸರಿಯಾಗಿ ಮನೆಯ ಯಜಮಾನತಿ ತುಂಗಮ್ಮನವರೂ ಬಂದರು—"ಜೋಯಿಸರೆ! ಕೋತಿಗಳಿಗೂ ಕೈನೋಡಿ ಹೇಳುತ್ತಾರೆಯೆ? ಸಾಮುದ್ರಿಕಾ ಶಾಸ್ತ್ರ ಇವಕ್ಕೂ ಸರಿ ಹೋಗುತ್ತದೆಯೇ!" ಎಂದು ಕೇಳಿದರು. ಆಗ ಜೋಯಿಸರು—"ಶಾಸ್ತ್ರ ಯಾರಿಗಿಲ್ಲ ಯಾರಿಗುಂಟು,? ನೋಡೋಣಮ್ಮ! ಕೊಡೊ, ನಿನ್ನ ಕೈನಾ, ಏ ತಿಮ್ಮಪ್ಪಾ!" ಎಂದು ಕೈನೋಡಿ ಹೇಳಿದರು.

ತಿಮ್ಮಣ್ಣ ಇನ್ನು ಆ ಮನೆಯಲ್ಲಿರುವಂತಿರಲಿಲ್ಲ. ಅದು ಪ್ರಯಾಣ ಹೊರಡುವುದೇ ಸರಿ! ಹನ್ನೆರಡುವರ್ಷ ಅದು ತಿರುಗಬೇಕು. ದೇಶ ದೇಶಾಂತರವೆಲ್ಲ ನೋಡುವ ಯೋಗ ಅವಕ್ಕೆ ಇತ್ತು. ತುಂಬಾ ಸಂಪಾದನೆ ಮಾಡುವ ಭಾಗ್ಯವಿತ್ತು ಅದಕ್ಕೆ; ಆದರೆ ಅದನ್ನೆಲ್ಲ ಅನುಭವಿಸುವವನು

ಇದರ ಬಾಲ್ಯ ಸ್ನೇಹಿತನಾದ ಶಿವರಂಜನ! ಹನ್ನೆರಡು ವರ್ಷಗಳು ಕಳೆದ ನಂತರ ಒಂದು ವಿಚಿತ್ರರೀತಿಯಲ್ಲಿ ಅದು ಇದೇ ಮನೆಗೆ ಹಿಂದಿರುವುದಾಗಿತ್ತು—ಎಂಥಾ ವಿಚಿತ್ರ ಸಂಗತಿ! ಆದರೆ ಈ ದಿನವೇ ಅದು ಆ ಮನೆಯನ್ನು ಬಿಡಬೇಕಾಗಿತ್ತು.

ಆದುದರಿಂದ ಇನ್ನೇನು ಮಾಡಬೇಕು? ಶಿವನ ತಂದೆ ಸಿಟ್ಟು ಬಿಟ್ಟು ಹೋಯಿತು. ಅವರು ಆ ಕೋತಿಯನ್ನು ಮುದ್ದಾಡಿದರು. ಅದರ ನಡುವಿಗೆ ಒಂದು ತಾಮ್ರದ ಕಡಗವನ್ನು ಹಾಕಿದರು. ಅದು ಟೊಳ್ಳಾಗಿತ್ತು ಅದರೊಳಗೆ ಅವರು ತಮ್ಮ ಹೆಸರನ್ನೂ ಊರನ್ನೂ ತಾರೀಖನ್ನೂ ಮತ್ತು ಶಿವರಂಜನನು ಅದಕ್ಕಿಟ್ಟ ಟಿಂ ಟಿಂ ಮ್ಯಾಣೀ ಎಂಬ ಅದರ ಹೆಸರನ್ನೂ ಒಂದು ಕಾಗದದಲ್ಲಿ ಬರೆದು ಸುರುಳಿಮಾಡಿ ಅದರೊಳಗೆ ಸೇರಿಸಿದರು. ತುಂಗಮ್ಮನಾಗಲೀ ಆಕೆಯ ಯಜಮಾನನಾಗಲೀ ಆ ಕೋತಿಯನ್ನು ಮನೆಯಾಚೆ ಕಳಿಸುವ ಆಲೋಚನೆಯನ್ನೇ ಬಿಟ್ಟುಬಿಟ್ಟರು. ಆದರೆ ಅದೇ ಸಂಜೆ ಹಾವಾಡಿಗರವನೊಬ್ಬ ಬಂದು ಈ ಕೋತಿಯನ್ನು ನೋಡಿ ತನಗೆ ಕೊಡಿರೆಂದು ಇವರನ್ನು ಇನ್ನಿಲ್ಲದಂತೆ ಬೇಡಿಕೊಂಡನು. ಅಂತು, ಆ ಕೋತಿಯು ಆ ಸಂಜೆ ಆ ಮನೆಯನ್ನು ಬಿಟ್ಟು ಹೊರಟಿತು. ಅದರ ತ್ರಿಲೋಕ ಸಂಚಾರಕ್ಕೆ ಆಗ ಆರಂಭ.

ಅದಾದನಂತರ ನಾಲ್ಕಾರುವರ್ಷಗಳಲ್ಲಿ ಶಿವನ ತಂದೆಯು ಕಾಲವಾದರು. ಅವರು ದೈವಾಧೀನರಾಗುವ ಮುಂಚೆ ಆ ಕೋತಿಯನ್ನು ನೆನೆದುಕೊಂಡು ಕಣ್ಣೀರು ಸುರಿಸಿದರು. ಕಡೆಯುಸಿರಿನಲ್ಲಿ—"ನಮ್ಮ ತಿಮ್ಮಣ್ಣ ಬಂದರೆ ಎಲ್ಲ ಸರಿಹೋಗುತ್ತೆ ಅಳಬೇಡ ಶಿವನನ್ನೇ ನೋಡಿಕೊಂಡು ನಿನ್ನ ದುಃಖ ಮರೆತಿರು ಇನ್ನೇನು ನಾಕೈದು ಮಳೆಗಾಲ ಕಳೆದುಬಿಡು. ಖಂಡಿತ ಅದು ಈ ಮನೆಗೆ ಹಿಂತಿರುಗಿ ಬರುತ್ತದೆ. ನಿನ್ನೂ ಶಿವನನ್ನೂ ಖಂಡಿತ ಅದು ಕಾದುಕೊಳ್ಳುತ್ತೆ! ಹೀಗೆಂತ ಹೇಳಲಾರೆ ಅದೆಲ್ಲ ದೇವರ ಮಾಯೆ! ರಾಮಾ, ರಾಮಾ!" ಎಂದು ಪ್ರಾಣ ಬಿಟ್ಟರು.

ಇಂದಿಗೆ ಆ ನಾಲ್ಕೈದು ವರ್ಷಗಳೆಲ್ಲ ಕಳೆದಿವೆ. ಶಿವರಂಜನ ಪರೀಕ್ಷೆಯಲ್ಲಿ ಪಾಸಾಗಿ ಮುಂದೆ ಕಾಲೇಜಿಗೆ ಹೋಗಬೇಕು. ಯಾರನ್ನು ಬೇಡು

ವುದು. ಏನು ಮಾಡುವುದು. ಎಂದು ತಿಳಿಯದೆ ತುಂಗಮ್ಮನು ಸಂಕಟ ಪಡುತ್ತಿದ್ದರು. ಶಿವನು ಆ ರಾತ್ರಿ ಕತೆಯನ್ನು ತನ್ನ ತಾಯಿಯವರ ನುಡಿಯಲ್ಲಿ ಕೇಳಿ ಮಲಗಿದನು. ಬೆಳಗಿನಜಾವ ಎಚ್ಚೆತ್ತನು. ತನ್ನ ಅಮ್ಮನನ್ನು ಕರೆದು ಹೇಳಿದನು– "ಅಮ್ಮಾ ನನಗೊಂದು ಕನಸಾಯಿತು. ಹನುಮಂತ ಆ ಪಟದಿಂದ ಇಳಿದು ಬಂದು ತಲೆಯ ಮೇಲೆಕ್ಕೆಯಿಟ್ಟು ಸುಖವಾಗಿ ಬಾಳಪ್ಪಾ! ಎಂದು ಬಿಟ್ಟನು. ಆ ಹನುಮಂತನೇ ಆ ಕೋತಿ ಇರಬಹುದೇನಮ್ಮ—" ಎಂದು ಕೇಳಿದಾಗ ಆ ತಾಯಿಯು ಬಹು ಸಂಕಟಪಟ್ಟಳು. "ಆ ಕೋತಿಯೇ? ಅದು ಕೋತಿಯಲ್ಲಪ್ಪಾ! ಮನೆಗೆ ಇನ್ನೊಂದು ಮಗುವೇ ಆಗಿತ್ತು ಈ ಮನೆಯ ಭಾಗ್ಯದೇವತೆಯೇ ಆಗಿತ್ತು. ನಿನಗೆ ಈಗ ಹದಿನಾರನೇ ವರ್ಷ ಅದು ಹಿಂತಿರುಗಿ ಬಂದರೆ ಈಗಲೇ ಬರಬೇಕಪ್ಪ. ಮತ್ತೆ ಈ ಮನೆಗೆ ಹಿಂತಿರುಗಿ ಹೇಗೆ ಬರುತ್ತದೋ! ಇನ್ನು ಹೇಗೆ ನಮಗೆ ನೆರವಾಗುತ್ತದೋ? ನಾನು ಕಾಣೆನಮ್ಮಪ್ಪಾ! ಮಲಗು ನಿದ್ದೆಮಾಡು! ನಾನು ನಾಳೆ ನಿನ್ನ ಓದಿಗೆ ಇನ್ನೇನಾದರೂ ಏರ್ಪಾಡುಮಾಡುತ್ತೇನೆ. ಆದರೆ ದೇವರು ಸಹಾಯಮಾಡಬೇಕಪ್ಪಾ ತಂದೆ ಗುರುದೇವ! ನಮ್ಮ ಶಿವರಂಜನನನ್ನು ನೋಡಿಕೊಳ್ಳಪ್ಪ!" ಹೀಗೆಂದು ಹೇಳಿ ಮಗನನ್ನು ಸಮಾಧಾನಪಡಿಸಿ ಮಲಗಿಸಿಬಿಟ್ಟಳು.

ಮಾರನೆಯ ದಿನ ಒಂದು ಸಿನಿಮ ಕಥೆಯು ಆವೂರಿನ ಸಿನಿಮ ಮಂದಿರದಲ್ಲಿ ತೋರಿಸಲ್ಪಟ್ಟಿತು. ಶಿವರಂಜನನು ತನ್ನ ಗೆಳೆಯರ ಸಂಗಡ ಅದನ್ನು ನೋಡಲು ಹೋಗಿದ್ದನು. ಅದರಲ್ಲಿ ಒಂದು ಕೋತಿಯ ಕೆಲಸವು ಬಹು ಚೆನ್ನಾಗಿತ್ತು. ಬೆಳ್ಳಿಯ ಪರದೆಯ ಮೇಲೆ ಆ ಕೋತಿಯ ಆಟಗಳನ್ನು ನೋಡಿ ಆಶ್ಚರ್ಯಪಡದವರಿರಲಿಲ್ಲ. ಕೋತಿಯ ಕತೆಯೆಂದೇ ಅದಕ್ಕೆ ಆ ವೂರಿನವರ ಹೆಸರಾಯಿತು. ಹೆಂಗಸರು ಮಕ್ಕಳು ಬಹಳ ಆಸೆಪಟ್ಟುಕೊಂಡು ಹೋಗಿ ಆಟವನ್ನು ಪರದೆಯಮೇಲೆ ನೋಡಿ ಬರುತ್ತಿದ್ದರು.

ತುಂಗಮ್ಮನವರೂ ಹೋಗಿ ಆ ಆಟವನ್ನು ನೋಡಿ ಬಂದರು. ಆದರೆ ಅದೇ ಕತೆಯನ್ನೇ ಮತ್ತೆ ಅವರಿಗೆ ನೋಡಬೇಕೆನ್ನಿಸಿತು. ಕೋತಿಯು ತನ್ನ ಬುದ್ಧಿವಂತಿಕೆಯನ್ನು ತೋರಿಸಿದ್ದುದರಿಂದ ಅವರಿಗೆ ಅದನ್ನು ಪುನಹಾ

ನೋಡಬೇಕೆನ್ನಿಸಿತು. ಆದರೆ ಆ ಕೋತಿಯ ಆಟಗಳಲ್ಲಿ ಕೆಲವೆಲ್ಲ ಅದು ಮನೆಯಲ್ಲಿ ಹಿಂದೆ ಆಡುತ್ತ ಇದ್ದಂತೆಯೇ ಇದ್ದುವು. ಇನ್ನು ಕೆಲವು ಹೊಸ ಆಟಗಳನ್ನೂ ಅದು ಕಲಿತಿತ್ತು. ಮನುಷ್ಯನನ್ನು ವಿಾರಿಸಿ ಅದು ಕೆಲಸ ಮಾಡುವುದೂ ಮತ್ತು ಮನುಷ್ಯರಿಗೆ ಪರಮ ಮಿತ್ರನಾಗಿರುವುದೂ ಅತ್ಯಂತ ಆಶ್ಚರ್ಯಕರವಾಗಿತ್ತು. ಆದರೂ ಅದೇ ಇದು ಎನ್ನುವುದು ಹೇಗೆ? ಆಧಾರವೇನು. ಆಗ ತುಂಗಮ್ಮನವರಿಗೆ ಒಂದು ನೆನಪು ಬಂತು. ಅದೇ ನೆಂದರೆ ಆ ಕೋತಿಯ ಎದೆಯ ಮೇಲೆ ಒಂದು ಕಪ್ಪು ಮಚ್ಚೆಯಿತ್ತು. ಅದನ್ನು ಕಂಡರೆ ಸಾಕು—ಎಂದುಕೊಂಡು ಮತ್ತೆ ನಾಲ್ಕೈದು ಬಾರಿ ಅದೇ ಚಿತ್ರವನ್ನು ನೋಡಿಬಂದರು. ಆ ಮಚ್ಚೆಯು ಯಾವಾಗಲೋ ಒಮ್ಮೆ ಕಾಣಿ ಸಿತು. ಇದೇ ಆ ಕೋತಿಯೆಂತ ದೃಢವಾಯಿತು! ಇವರ ಟಿಂಟಿಂ ಮಾಣಿಯೇ ಆದಿರಬೇಕು.

ಆದರೇನು ರಜತ ಪರದೆಯಮೇಲೆ ನೆರಳಾಗಿ ಕಾಣುವ ಕೋತಿಯಿಂದ ಇವರಿಗೇನು ಪ್ರಯೋಜನ. ಮಾರನೆಯ ದಿನ ಶಿವರಂಜನನು ಸಿನಿಮಾ ಆಫೀಸಿಗೆ ಹೋಗಿ ಆ ಚಿತ್ರದ ವಿಚಾರವನ್ನೆಲ್ಲಾ ತಿಳಿದುಕೊಂಡನು. ಆ ಹುಡುಗನ ಮಾತೆಲ್ಲ ಕೇಳಿ ಅವರು ನಕ್ಕರು. ಆದರೆ ಆವೇಳೆಗೆ ಅಲ್ಲಿಗೆ ಆ ಸಿನಿಮ ಚಿತ್ರದ ಏಜೆಂಟರು ಬಂದರು. ಅವರಿಂದ ಇನ್ನಷ್ಟು ಆ ಚಿತ್ರದ ವಿವರವು ತಿಳಿದುಬಂದಿತು.

ಅ ಚಿತ್ರದಲ್ಲಿದ್ದ ಕೋತಿಯ ವಿಚಾರಕ್ಕೆ ಅವರು ಹೀಗೆಂದರು— "ಈ ಚಿತ್ರದಲ್ಲಿನ ಕೋತಿಯ ಮಾಲೀಕನು ಅಮೆರಿಕದಿಂದ ಇಂಡಿಯಾಕ್ಕೆ ಬಂದಿದ್ದಾನೆ. ಆತನು ಈ ಕೋತಿಯನ್ನು ಈ ದೇಶದಿಂದ ಹನ್ನೆರಡು ವರ್ಷಗಳ ಹಿಂದೆ ತೆಗೆದುಕೊಂಡು ಹೋಗಿದ್ದನಂತೆ. ಪುನಹಾ ಆ ಕೋತಿ ಗಾಗಿಯೇ ಈ ದೇಶಕ್ಕೆ ಬಂದಿದ್ದಾನಂತೆ. ಈ ದೇಶದಲ್ಲೆ ತಿರುಗುತ್ತಿದ್ದಾನೆ. ಈ ಊರಿಗೂ ಬರಬಹುದು"—ಈ ವಿಚಾರವನ್ನೆಲ್ಲ ತಿಳಿದುಕೊಂಡು ತನ್ನ ಮನೆಗೆ ಶಿವನು ಹಿಂದಿರುಗಿದನು.

ತಾಯಿ ಮಕ್ಕಳು ಆ ಕೋತಿಯ ಬರವಿಗಾಗಿ ಕಾದಿದ್ದರು. ಮನೆಯ ಹುಡುಗನು ಪರದೇಶಕ್ಕೆ ಹೋಗಿ ಖ್ಯಾತಿವಂತನಾಗಿ ಹಿರಿಯನಾಗಿ ಹಿಂತಿರುಗಿ

ಬಂದರೆ ಏನೆಲ್ಲ ಮರ್ಯಾದೆಮಾಡಬಹುದೋ ಅದನ್ನೆಲ್ಲ ಮಾಡಿಬಿಡಲು ಆ ತಾಯಿ ಮತ್ತು ಆ ಹುಡುಗ ಸಿದ್ಧರಾಗಿದ್ದರು. ಆದರೆ ಆ ಕೋತಿ ಇವರನ್ನು ಗುರುತಿಸಬಲ್ಲುದೆ? ಏನೋ ಕೋತಿ ಪ್ರಾಣಿ—ಪಾಪ ಅದರಿಂದ ಅಷ್ಟೆಲ್ಲ ತಿಳಿವಳಿಕೆಯನ್ನು ಬಯಸುವುದು ಸರಿಯಲ್ಲ. ಮತ್ತು ಸಹಾಯ ಬಯಸುವುದಂತೂ ಹುಚ್ಚುತನವೇ ಸರಿ ಆದರೂ ನೋಡೋಣ ಎಂದು ಕಾದುಕೊಂಡಿದ್ದರು.

ಅದೇ ಕೋತಿಯದೇ ವಿಶೇಷ ಕೆಲಸವಿರುವ ಇನ್ನೊಂದು ಕತೆಯ ಸಂಗಡ ಅದರ ಈಗಿನ ಯಜಮಾನನು ಒಂದು ಶುಭ ದಿವಸ ಅದೇ ಊರಿಗೆ ಬಂದುಬಿಟ್ಟನು. ಊರಿನವರು, ಗುಂಪುಗೂಡಿಕೊಂಡು ಬಂದು ಆ ಕೋತಿಯನ್ನು ನೋಡಿಕೊಂಡು ಬಂದರು. ಅದರದೇ ಒಂದಿಷ್ಟು ಬೇರೆ ಆಟವನ್ನು ಸಿನಿಮಾ ಕತೆಯ ವಿರಾಮಕಾಲದಲ್ಲಿ ಆ ಅಮೆರಿಕದವನು ಆಡಿಸಿದನು! ಕೋತಿ ಶರಬತ್ತು ಕುಡಿಯಿತು. ಸಿಗರೇಟು ಸೇದಿ, ಉಂಗುರ ಉಂಗುರವಾಗಿ ಹೊಗೆಬಿಟ್ಟಿತು. ಹಾರ್ಮೋನಿಯಂ ಬಾರಿಸಿತು. ಅದೇ ಕೋತಿ ಆಗ ಶರಟು ಬೂಡ್ಸು ಮುಂತಾದ ಪೋಷಾಕೆಲ್ಲ ಹಾಕಿಕೊಂಡು ಬೆತ್ತಹಿಡಿದು ಠೀವಿಯಿಂದ ನಡೆದಾಡಿತು. ಟೈಪುರೈಟರ ಬಳಿ ಕುಳಿತು ನಾಕಾರು ಸಾಲು ಪದಗಳನ್ನು ಕೇವಲ ಅಭ್ಯಾಸಬಲದಿಂದ ಟೈಪು ಮಾಡಿತು. ಅನಂತರ ಬಟ್ಟೆಯೆಲ್ಲ ಬಿಚ್ಚಿ ಮಡಿಸಿಟ್ಟಿತು........ಆಗ ಎಲ್ಲರಿಗೂ ಆಶ್ಚರ್ಯವಾಯಿತು. ಆಗ ಎಲ್ಲರೆಂದರು "ಪಾಪ ಮಾತುಬಾರದು ಈ ಕೋತಿಗೆ. ಮಾತು ಬಂದಿದ್ದರೆ ಅದರ ಕತೆಯನ್ನೆಲ್ಲಾ ಹೇಳುತ್ತಿತ್ತೋ ಏನೋ" ಎಂದರು.

ಆಗ ಆ ಗುಂಪಿನಲ್ಲಿದ್ದವರು ಒಬ್ಬರು ಕೇಳಿದರು ಅದರಲ್ಲಿ ಏನು ಟೈಪು ಮಾಡಿದೆ ನೋಡೋಣವೆ?

ಅದಕ್ಕೆ ಆ ಕೋತಿಯ ಯಜಮಾನ ಆ ಕಾಗದವನ್ನು ಓದಿದನು. "ನಾನಾಗಿದ್ದೇನೆ ಟಿಂ ಟಿಂ ಮಾಣೀ! ನನ್ನ ತಮ್ಮ ನನ್ನ ಹುಡುಕಿಕೊಂಡು ಬಂದಿದ್ದಾನೆ. ಯಾರಾದರೂ ಕಂಡಿದ್ದೀರಾ? ನನ್ನ ತಮ್ಮನನ್ನು, (ಮೈ ಹೂಂ ಟಿಂ ಟಿಂ ಮಾಣೀ! ಮೇರಾ ಭೈಸೆ ಮಿಲ್‌ನೇ ಆಯಾಹೂಂ! ಹೈ ಕೋನ್ ಯಹಾ ಉಸ್ಕೋ ಜಾನ್‌ನೆವಾಲಾ?) ನೆರೆದವರಲ್ಲಿ ಕೆಲವರು

ನಕ್ಕುಬಿಟ್ಟರು. ಉಳಿದವರೆಲ್ಲ ನೀರವದಲ್ಲಿದ್ದರು. ಸಭೆಯಿಂದ ಹೀಗೆಲ್ಲ ಕೂಗು ಕೇಳಿತು—"ಅಪ್ಪ ಇಲ್ಲಾರೂ ಇಲ್ಲಪ್ಪ. ನಿನ್ನ ತಮ್ಮ ಆ ಮರದ ಮೇಲೆ ಇದ್ದಾನಪ್ಪ! ಅಲ್ಲೆ ಇದ್ದಾನಲ್ಲ ನಿಮ್ಮಣ್ಣ!" ಕೆಲ ಕೆಲವರು ನಗುತ್ತ ಲಿದ್ದಾಗ ಇನ್ನು ಕೆಲವರು ಆಶ್ಚರ್ಯಪಡುತ್ತಿದ್ದರು.

ಆಗ ಸಭೆಯೊಳಗಿನಿಂದ ಒಬ್ಬ ಹುಡುಗನು ಎಂದು ನಿಂತನು. "ಅಮ್ಮ ಎಂದು ಕೂಗಿಕೊಂಡು ತನ್ನ ತಾಯಿಯ ಬಳಿಗೆ ಹೋಗಿ ಹೀಗೆಂದನು— "ಅಮ್ಮ ಕೂಗಿ ಕರೆಯಲೇನಮ್ಮ" ಆಕೆಯು "ಕೂಗಪ್ಪಾ ನೋಡೋಣ"— ಎಂದರು.

ಕತ್ತಲು ಎಲ್ಲೆಲ್ಲೂ! ಪರದೆಯ ಬಳಿ ಮಾತ್ರ ಬೆಳಕಿತ್ತು. ಆದ್ದರಿಂದ ಸಭೆಯಲ್ಲಿ ಯಾರು ಯಾರನ್ನು ಕರೆದರೆಂದು ಯಾರಿಗೂ ತಿಳಿಯಲ್ಲಿಲ್ಲ.

ಹುಡುಗನೊಬ್ಬನು ಗಟ್ಟಿಯಾಗಿ ಕೂಗಿ ಕರೆದನು. "ಟಿಂ ಟಿಂ ಮ್ಯಾಣೀ!" ಸಂಗಡಲೆ ಹೆಂಗಸೊಬ್ಬಳು ಅಳುತ್ತ ಅಳುತ್ತ "ತಿಂಮ್ಮಣ್ಣಾ! ಬಂದೆಯ ನನ್ನ ತಂದೆ!"—ಎಂದು ಕೂಗಿದಳು. ಕೋತಿ ಪರದೆಯ ಬಳಿ ಯಿಂದ ಒಂದೇ ಏಟಿಗೆ ಹಾರಿಬಿಟ್ಟಿತು. ಎಲ್ಲಿ ಹಾರಿತೆಂದು ಯಾರಿಗೂ ತಿಳಿಯಲ್ಲಿಲ್ಲ. "ದೀಪ! ದೀಪ! ದೀಪಹಾಕಿರಿ ಎಂನೆಲ್ಲ ಕೂಗಿ ಕೂಗಿ ಜನಗಳು ಹಾಹಾಕಾರವೆಬ್ಬಿಸಿದರು. ದೀಪ ಹತ್ತಿತು. ಕೋತಿಯನ್ನು ತಂದಿದ್ದ ಬಿಳಿ ಮನುಷ್ಯನೂ ಕೂಗಿ ಕರೆದನು. ಕೋತಿ ಹಿಂದಿರುಗಲ್ಲಿಲ್ಲ.

ಟಿಂ ಟಿಂ ಮ್ಯಾಣಿಯು ಹೋಗಿ ಆ ತಾಯಿಯ ತೊಡೆಯಮೇಲೆ ಕುಳಿತುಬಿಟ್ಟಿತು. ಆ ಹುಡುಗನನ್ನು ತನ್ನ ಹತ್ತಿರ ಕೈಕಾಲುಗಳಿಂದ ಎಳೆದು ಕೊಂಡು ಮುದ್ದಾಡುವಂತೆ ಮಾಡುತ್ತಿತ್ತು. ಎಲ್ಲರೂ ಆಶ್ಚರ್ಯಪಡು ತ್ತಿದ್ದರು.—"ಏನು ಕೋತಿಯಪ್ಪ ಎಲ್ಲಿ ಹೋದರೂ ಹೀಗೇ ಆ ಕೋತಿ ಬುದ್ಧಿ" ಎಂದು ಕೆಲವರೆಂದರು. "ಹೆಂಗಸರು ಹೆದರಿ ಯಾರು" ಎಂದು ಕೆಲವರು ಕೂಗಿದರು—"ಕರೆಯಪ್ಪ ಆ ನಿನ್ನ ಗಡವ ಕೋತಿಯನ್ನು."

ಕೋತಿಯ ಹೊಸ ಯಜಮಾನನು ಆಗ ಎಲ್ಲರನ್ನು ಕುರಿತು ಹೀಗೆಂ ದನು—"ಮಹನೀಯರೆ ಮತ್ತು ತಾಯಂದಿರೆ! ಇದೆ ನನಗೆ ಪವಿತ್ರವಾದ ದಿನ. ಈ ದಿನ ನಾನು ಈ ಕೋತಿಯ ತಾಯಿಯರನ್ನು ಕಂಡುಕೊಂಡೆನು.

ಈ ಕೋತಿಯು ನನ್ನ ಸಂಗಡ ಜಹಜು, ರೈಲು, ವಿಮಾನಗಳಲೆಲ್ಲ ತಿರುಗಿ ಬಂದಿದೆ. ಇದು ನನಗೆ ಲಕ್ಷಾಂತರ ಹಣ ಸಂಪಾದಿಸಲು ಸಹಾಯಮಾಡಿದೆ. ಇದಕ್ಕೆ ಚಿಕ್ಕಂದಿನಲ್ಲಿ ಯಾರು ಪಾಲಕರಿದ್ದರೋ ಅವರನ್ನು ಹುಡುಕಿಕೊಂಡು ಈ ದೇಶಕ್ಕೆ ಬಂದೆನು. ಇಂಡಿಯಾ ದೇಶವೆಲ್ಲ ಸುತ್ತಿದೆ. ಆದರೆ ಇದು ಯಾವಾಗಲೂ ಯಾರ ಬಳಿಯಲ್ಲೂ ಸಲುಗೆಯಿಂದ ಇದ್ದ ಪ್ರಾಣಿಯಲ್ಲ. ಇದಕ್ಕೆ ಈಗ ಸುಮಾರು ಹದಿನಾರು ವಯಸ್ಸಿರಬಹುದು. ಇನ್ನು ಸುಮಾರಾಗಿ ಒಂಭತ್ತು ವರ್ಷ ಇದು ಬದುಕಿರುತ್ತದೆ. ಸಾಯುವ ಕಾಲಕ್ಕೆ ಇದು ಹುಟ್ಟಿದ ದೇಶದಲ್ಲೇ ಇರಲೆಂದು ಕರೆದುತಂದಿದ್ದೇನೆ. ನರನಂತೆ ವಾನರನು! ಅದಕ್ಕೂ ತಾಯಿನಾಡಿನ ಮಮತೆ ಇರುತ್ತದೆ. ಇದಕ್ಕೆ ಮಾತು ಬರದಿದ್ದರೇನು.? ಇವರ ಮೊಕಭಾವಚರ್ಯೆಗಳಿಂದ ಅದರ ಪ್ರೀತಿಯಲ್ಲವೂ ವ್ಯಕ್ತವಾಗುತ್ತದೆ. ಅದರ ನಡುವಿನಲ್ಲಿ ಇದೊಂದು ತಾಮ್ರದ ಗೊಲಸು ಇತ್ತು ಅದು ಬಹಳ ಕಿರಿದಾಗಿ ಚರ್ಮವನ್ನು ಕೊರೆಯುತ್ತಿತ್ತು; ಅದನ್ನು ನಾನು ಕತ್ತರಿಸಿ ತೆಗೆದಾಗ, ಈ ಕಾಗದವು ಅದರಲ್ಲಿತ್ತು—ಇದನ್ನು ಯಾರಾದರೂ ಓದಿಕೊಳ್ಳಬಹುದು" ಅದರ ಹಿಂದಿನ ವಿಳಾಸವನ್ನೂ ಈ ಮಾತುಗಳನ್ನೂ ಕೇಳಿಯೂ ಎಲ್ಲರೂ ಸುಮ್ಮನಿದ್ದರು.

ಶಿವರಂಜನನು ಗುಂಪಿನೊಳಗಿಂದ ದಾರಿಬಿಡಿಸಿಕೊಂಡು ಬಂದು ಸುರುಳಿ ಬಿಚ್ಚಿ ಆ ಕಾಗದವನ್ನು ಓದಿದನು. ಅದು ಅವನ ತಂದೆ ಬರೆದ ಕಾಗದ. ಆಗ ಆ ಊರಿನ ಕೆಲವು ಹಿರಿಯರು, ಶಿವನ ತಂದೆಯನ್ನ ನೆನಸಿಕೊಂಡರು—"ಅವರೆ ನಮ್ಮ ಜೋಡಿಸಾಲು ಗುಮಾಸ್ತೆ ಶಿವಕುಮಾರಪ್ಪನವರು! ಪಾಪ ಚಿಕ್ಕವಯಸ್ಸಿನಲ್ಲೇ ಕಣ್ಣುಮುಚ್ಚಿಬಿಟ್ಟರು. ಯುದ್ಧ ಶುರುವಾದಾಗಲೇ ಅಲ್ಲವೇ ಅವರು ಕಾಲವಾದದ್ದು—ಹೀಗೆಂತ ಒಬ್ಬರು ಹೇಳಿದರು. ಇನ್ನೊಬ್ಬರು ಎದ್ದು ಆ ಬಿಳಿಯ ಮನುಷ್ಯನನ್ನು ಕುರಿತು—"ಸ್ವಾಮಿ, ಕೋತಿಯ ನಾಯಕರೆ ಅಲ್ಲ ನವಕೋತಿನಾಯಕರೇ ಸರಿ ಹೋಯಿತೇನಿರಪ್ಪ. ಸ್ವಾಮಿ ಬಿಳಿಯವರೆ! ಈ ಬಾಲಕ ತಮ್ಮ ಮುಂದೆ ನಿಂತಿರುವಾತ ಇವನೇ ಆ ಕಾಗದ ಬರೆದವರ ಮಗ. ನಾನು ಆ ಕಾಲದಲ್ಲಿ ಶೇಕದಾರನಾಗಿದ್ದೆ. ಈ ಕೋತಿ ತಿಮ್ಮಣ್ಣ ಇದೆಯಲ್ಲ ಇದು ಒಂದು ದಿನ ಶುದ್ಧ ಕೋತಿಚೇಷ್ಟೆ ಮಾಡಿತು! ಊರವರೆಲ್ಲ ನನ್ನ ಮೇಲೆ ರೇಗಿಬಿದ್ದರು.

ನಾನಾಗ ಇದು ಹುಚ್ಚು ಕೋತಿ ಹೊರಡಿಸಿಬಿಡಿ—ಎಂತ ಅಪ್ಪಣೆಮಾಡಿ ಹೇಳಿದ್ದೆ! ಈ ತಾಮ್ರದ ಕಡಗವೂ ಆದರ ಸೊಂಟದಲ್ಲಿ ಆಗ ಇತ್ತು. ಪಾಪ ಶಿವು ಅವರ ಮಗ. ದೊಡ್ಡ ಪರೀಕ್ಷೆಯಲ್ಲಿಯೂ ತಾನು ಮೊದಲು ನಿಂತಿದ್ದಾನೆ ಪಾಸುಮಾಡಿ! ಇವನಿಗೇನು ಸಹಾಯಮಾಡುತ್ತೀರೋ ಮಾಡಿ ಆದರೆ ಆ ಕೋತಿ ಈ ಊರಲ್ಲಿ ಬಿಟ್ಟುಹೋಗೋದಾದರೆ ಒಂದು ದೊಡ್ಡ ಬೋನುಮಾಡಿಸಿಟ್ಟು ಇದನ್ನು ಅದರಲ್ಲಿಟ್ಟು ಹೋಗಿ ಸ್ವಾಮಿ. ಇನ್ನೇನೂ ಇಲ್ಲ ಕೋತಿಚೇಷ್ಟೆ ಅಂತ! ಯಾವಾಗಲೂ ಹೀಗೆ ಸಿನಿಮದಲ್ಲಿ ಬೆಳಕು ಹಿಡಿದು ನಿಲ್ಲಿಸಿ, ಸಿಗರೇಟು ಸೇದಿಸಿ ನೋಡುಕ್ಕಾಗುತ್ತೆಯೆ? ಏನೋ ಮುಪ್ಪಿನ ಮುದುಕ ಮಾತಾಡಿಬಿಟ್ಟೆ! ಅದೇನು ಇದೆಯೋ ನಿಮ್ಮ ಕೆಲಸ ಮುಂದೆ ಜರುಗಿಸಿಬಿಡಿ."

ಶೇಕದಾರ್ರ ಮಾತು ಮುಗಿದ ಮೇಲೆ ಕೋತಿ ತಿಮ್ಮಣ್ಣನನ್ನು ತಂದಿದ್ದ ಬಿಳಿಯಾತನು ಇನ್ನೇನೂ ಹೇಳಲ್ಲಿಲ್ಲ. ಆ ಕೋತಿಯನ್ನು ಶಿವರಂಜನನ ಮನೆಗೆ ತನ್ನ ಕಾರಿನಲ್ಲಿ ಕಳಿಸಿಕೊಟ್ಟುಬಿಟ್ಟನು. ಅನಂತರ ಆ ಕೋತಿಯು ಶಿವರಂಜನನ ಮನೆಗೆ ತಲುಪಿತು. ಅದು ಅಲ್ಲಿ ಹಳೆಯದೆಲ್ಲ ನೆನಸಿಕೊಂಡು ಹಾರಿಹತ್ತಿ ನೆಗೆದಾಡಿತು. ಯಜಮಾನ ಶಿವಕುಮಾರೈಯನು ಮಲಗುತ್ತಿದ್ದ, ಜಾಗಕ್ಕೆ ಹೋಗಿ ಹತ್ತಿ ಹಾರಿನೋಡಿ ಆ ರಾತ್ರಿಯೆಲ್ಲ ಆ ಮೂವರೂ ಕೂತಿದ್ದರು—ತಾಯಿ ಮಕ್ಕಳು ಮಾತಾಡುತ್ತಿದ್ದಾಗ ಕೋತಿ ಮಾತಾಡಲಿಲ್ಲವಾದರೂ, ಎಲ್ಲವನ್ನು ಗ್ರಹಿಸಿಕೊಳ್ಳುತ್ತಿತ್ತೋ ಹೋಗೋ.

ಮಾರನೆಯ ದಿನ ಬಿಳಿಯವನು ಆ ಕೋತಿಯು ಸಂಪಾದಿಸಿದುದರಲ್ಲಿ ಇಪ್ಪತ್ತನೇ ಒಂದು ಭಾಗವೆಂದು ಕೆಲವು ಸಾವಿರ ರೂಪಾಯಿಗಳನ್ನು ಆ ಊರಿನ ಬ್ಯಾಂಕಿನಲ್ಲಿಟ್ಟು ಈ ಶಿವರಂಜನನು ತನಗೆ ಸಮಯಬಂದಾಗ ತೆಗೆದುಕೊಳ್ಳುವಂತೆ ಏರ್ಪಡಿಸಿ, ತಾನು ಬೇರೆ ಊರಿಗೆ ಹೊರಟುಹೋದನು.

ಮಾರನೆಯ ದಿನವೇ ಕೋತಿ ತಪ್ಪಿಸಿಕೊಂಡು ಊರೆಲ್ಲ ತಿರುಗಿಬಂತು. ಈ ಬಾರಿ ಯಾರಿಗೂ ಏನೇನೂ ತಂಟೆಮಾಡಲಿಲ್ಲ. ಎಲ್ಲ ಮರಗಳನ್ನು ಹತ್ತಿ ಎಲ್ಲ ಸೂರುಗಳಲ್ಲೂ ಜಾರಿ ಅಲ್ಲಿ ಹಾರಿ, ಇಲ್ಲಿ ನೆಗೆದು, ಅಂತ್ಯದಲ್ಲಿ ಮನೆಗೆ ಹಿಂದಿರುಗಿತು. ಅದಕ್ಕೋಸ್ಕರ ಇಟ್ಟಿದ್ದ ತಟ್ಟೆಯಲ್ಲಿ ಅನ್ನ, ರೊಟ್ಟಿ, ಹಣ್ಣುಗಳನ್ನು ತಿಂದಿತು. ಮಾರನೆಯ ದಿನವೇ ತುಂಗಮ್ಮ

ನವರ ತೊಡೆಯ ಮೇಲೆ ಅದು ಕಣ್ಣುಮುಚ್ಚಿ ಕಡೆಯುಸಿರುಬಿಟ್ಟಿತು. ಅದರ ಮುಖ ಲಕ್ಷಣವಾಗಿತ್ತೆಂದು ನೆರಮನೆಯಾಕೆ ಬಂದು ನಿಂತು ನೋಡಿ ಆಚ್ಚರಿ ಬಟ್ಟರು. ಮನೆ ಯಜಮಾನನು ಕಡೆಯ ಉಸಿರಿನಲ್ಲಿ ಹೇಳಿದಂತೆ ಅದೇ ಕೋತಿಯು ಹಿಂದಿರುಗಿ ಬಂದು ಇವರಿಗೆ ಸಾಕಾದಷ್ಟು ಐಶ್ವರ್ಯವನ್ನು ದೊರಕಿಸಿಟ್ಟು ಹೋಗಿತ್ತು.

ಶಿವರಂಜನ ಓದಿಕೊಂಡು ದೊಡ್ಡ ದೊಡ್ಡ ಕಾರ್ಯಗಳನ್ನೇ ಮಾಡಿದನು. ಕೋತಿಗಳನ್ನು ಕಂಡರೆ ಅವನಿಗೆ ತುಂಬಾ ಗೌರವ. ಕೋತಿಯೇ ಅವನಿಗೆ ಭಾಗ್ಯದೇವತೆಯಾಗಿತ್ತು.



# ೬. "ಬಿಂದು ಮಾಧವ"

ಭೋಜನ ಭೀಮಾಚಾರ್ಯರ ಮಕ್ಕಳೇತಾನೆ ಆ ವೇದಾಂತ ಡಿಂಡಿಮ ರಾಜಾಚಾರ್ಯರು. ಭೀಮಾಚಾರ್ಯರು ತಮ್ಮ ಬಿರುದನ್ನು ಸ್ವಪ್ರಯಾಸ ದಿಂದಲೇ ಸಂಪಾದಿಸಿದರು. ತಮ್ಮ ಮಕ್ಕಳಲೊಬ್ಬನಾದರೂ ಸರಸ್ವತಿಯ ಕೈಹಿಡಿಯಲೆಂದು ಆಶೆಬಿಟ್ಟು ರಾಜಾಚಾರ್ಯರನ್ನು ಬಿರುದೊಣ್ಣೆಯ ವಶಕ್ಕೆ ಕೊಟ್ಟರು. ಇತ್ತಲಾಗಿ ರಾಜಾಚಾರ್ಯರಿಗೆ ಗುರು ಪಾಠ ಗಿಣಿ ಪಾಠವಾಗಿ ವೇದಾಂತಡಿಂಡಿಮರೆಂಬ ಬಿರುದು ಬರುವ ಹೊತ್ತಿಗೆ ಭೋಜನ ಭೀಮಾ ಚಾರ್ಯರ ಉಳಿದ ಮಕ್ಕಳೆಲ್ಲರೂ ತರಹವಾರಿಯ ಉದರಜಾಡ್ಯದಿಂದ ವರಗಿ ಹೋದರೇ ವಿನಾ ತಂದೆಗಳಾದ ಭೀಮಾಚಾರ್ಯರ ಬಿರುದಿನ ಪದವೀಧರ ರಾಗಲು ಯೋಗ್ಯರಾಗಿ ಯಾರು ಸಿಲ್ಲಲಾರದೆ ಒಂದೆರಡು ಮೂರನೆಯ ಮೆಟ್ಟಲಲ್ಲಿಯೇ ಕಾಲುಸೋತು ಬಿದ್ದರು.

ಹೋಗಲಿ ಅಂತು ರಾಜಾಚಾರ್ಯರು ಬಿರುದು ಪಡೆಯುವ ದಿನವಂತು ಬಹು ಸಂಭ್ರಮ. ಊರಲ್ಲಿ ಎಲ್ಲರೂ ಬಂದು ನೆರೆದಿದ್ದರು. ಬರದವರೇ ಪಾಪಿಗಳು. ತೋರಣ, ತೊಂಗಟಿ, ಸಿಂಧು, ಸೀಗುರಿ, ಚಾಮರ, ಚಮತ್ಕಾರಗಳೋ ಕೇಳಬೇಕೆ! ಶೀಕಣ್ಠೈಂಗಾರ್ಯರ ಪಟ್ಟೆವಾಳಿ ಧೋತ್ರ ವನ್ನೇ ತಂದು ಗುರುಗಳು ಕೂರುವ ಕಡೆ ಹಾಸಿದ್ದರು.

ಶ್ರೀ ಚಾಮರಾಜೇಂದ್ರ ಒಡೆಯರವರ ಮದುವೆಯಲ್ಲಿ ಭೀಮಾಚಾರ್ಯ ರಿಗೆ ಕೊಟ್ಟಿದ್ದ ಬಿರುದಾವಳಿಯ ಜರತಾರಿ ಶಾಲು, ಜೋಡಿಯನ್ನೇ ರಾಜಾ

ಚಾರ್ಯರು ಹೊದ್ದಿದ್ದರು. ರಾಜಾಚಾರ್ಯರು ಅದನ್ನು ಹೊದಿಯು ವಾಗ ಬಲು ಚರ್ಚೆಮಾಡಿ ಸ್ವಯಂಪ್ರಭೆ, ಸ್ವಯಂಪ್ರತಾಪ ಮೊದಲಾದ ವೇದಾಂತ ಟೀಕೆಗಳಿಂದ ಶ್ಲೋಕಗಳನ್ನುದ್ಧರಿಸಿ ಹೇಳಿ ತಂದೆಯವರ ಮನಸ್ಸನ್ನು ತಲೆಕೆಳಗು ಮಾಡಿಬಿಟ್ಟು, ತಾವು ಶಾಲು ಹೊದೆಯಬೇಕಾದರೆ ಸ್ವಯಂ ಶ್ರೀ ಚಾಮರಾಜರೆ ಹರಿಸಿ ಕೊಡಬೇಕೆಂದೂ ತಾವಾಮೇಲೆ ಹೊದಿಯಬೇಕೆಂದು ಶ್ಲೋಕರೂಪವಾಗಿ ವಾದಾನುವಾದ ಮಾಡುತ್ತ ಹೇಳಿದರು. ಅಯ್ಯೋ! ಈ ಸರಸ್ವತಿಯ ಜಿಹ್ವೆಯನ್ನು ಕೇಳಲು ರಾಜರಿಲ್ಲವೆ ಎಂದು ಭೋಜನ ಭೀಮಾಚಾರ್ಯರು ಕೈ ಕೈ ಮುರಿದುಕೊಂಡರು.

ಎಲ್ಲರೂ ನೆರದ್ದಿದ್ದರು. ಇನ್ನೇನು ಬಿರುದುಕೊಡುವ ಸಮಯ— ಆಗ ರಾಜಾಚಾರ್ಯರು, ಇಲ್ಲವೇ ಇಲ್ಲ ಆಳುಗಳು ಅಡ್ಡಾಡಿದರು ಹುಡುಕಿ ಗುಸು ಗುಸು ಗುಟ್ಟಿದರು. ಹೊರಗಡೆ ವಾದ್ಯ ಮೇಳ ಕೇಳಹತ್ತಿತು. ಕಡೆಗೆ ರಾಜಾಚಾರ್‍ಯರು ಬಲಗಾಲನ್ನು ಮೊದಲೊಳಗಿಟ್ಟು ಎಲ್ಲಿಂದಲೋ ಹೊಸ್ತಿಲ ದಾಟಿ ಬಂದರು. ಪಲ್ಲಕ್ಕಿಯೊಂದನ್ನು ಬಹು ಸಂಭ್ರಮದಿಂದ ಶಿಷ್ಯರೆಲ್ಲರೂ ಸೇರಿ ಹೊತ್ತು ತಂದು ಜನಗಳ ಮಧ್ಯದಲ್ಲಿಟ್ಟರು. ಗುರುಗಳು ಶಿಷ್ಯನ ವಿರಹಕ್ಕಾಗಿ ಬಹಳವಾಗಿ ಕಣ್ಣೀರು ಸುರಿಸಹತ್ತಿದರು. ಸಂಗಮೇಶ್ವರ ಭಟ್ಟರು ಭರ ಭರ ಬಂದು ಕಿವಿಯಲ್ಲಿ ಕೇಳಿದರು. "ಬೇರೆ ಬಟ್ಟೆ ತಂದು ಕೊಡಲೇನು? ಇದರಾಗೆ ಕಣ್ಣೀರು ವರಸಬೇಡಿರಿ. ಈ ಶಾಲು ನಂದಲ್ಲ. ಇನ್ನೊಂದು ದಿನ ಸಿಗದೇ ಹೋದೀತು. ಏನ್ರಿ ಆಚಾರ್‍ರೆ"—ಎಂದು ಕೇಳಿದ್ದಾಗ್ಗೆ ಗುರುಗಳು ಸುಮ್ಮನಾಗಿ ಆಚಾರ್ಯರನ್ನು ಕರೆದು ಆಚ್ಚಗನ್ನಡದಲ್ಲಿ ಹೀಗೆ ಹೇಳಿದರು—"ಶಿಷ್ಯಾ ನಿನ್ನ ವಾಕ್ಚಾತುರತೆಯನ್ನು ಶ್ರವಣಮಾಡಲಿಕ್ಕೆ ಉತ್ಸುಕರಾಗಿ ಚಾತಕ ಪಕ್ಷಿಗಳಂತೆ ಆಸೀನರಾಗಿರುವ ಈ ಮಾನವ ಸಭಾಸದರನ್ನು ಸಾನಂದಿತರನ್ನಾಗಿ ಮಾಡಯ್ಯಾ! ಅವರೇ ನಿನಗೆ ಈ ಬಿರುದನ್ನು ಕೊಡಲಿ!" ಆಗ ರಾಜಾಚಾರ್ಯರು ಪಲ್ಲಕ್ಕಿಯಲ್ಲಿದ್ದ ಗುರು ದಂಡಕ್ಕೆ ಕೈಮುಗಿದು ಹೇಳಿದರು—"ಸುಖಾಸೀನರಾದ ಸಭಾಸದರೇ ನಾನು ಹೇಳತಕ್ಕದ್ದೇನಿದೆ. ಗುರು ವಿರಹದುಃಖದಲ್ಲಿ ನಾನು ಮುಳಿಗೇ ಹೋದೆ! ಆದರೂ ಒಂದು ಶ್ಲೋಕವನ್ನು ಕಲ್ಪಿನಮಾಡಿ ಹೇಳಿ ನನ್ನ ಗುರೂಪದೇಶಿತ ವಿದ್ಯೆಯಲ್ಲಿ ಕಿಂಚತ್ತನ್ನು ತೋರಿಸುವೆನು" ಎಂದು ಗಂಟಲು ಸರಿಮಾಡಿಕೊಂಡು

ತಾರಕ, ಮಧ್ಯಮ, ಮಂದರ ಶೃತಿಗಳನ್ನು ಆಗಾಗ್ಗೆ ಬದಲಾಯಿಸಿ ಕೊಳ್ಳುತ್ತ ಹೇಳತೊಡಗಿದರು :—

ಎದುರಲ್ಲಿ ನೆರೆದಿರುವ ।
ಸದಯ ಹೃದಯಸಭ್ಯರೇ ।
ಉದಹೃತವುದ್ಧರಿಸುವೆ ಶ್ರವಣಿಸಿರಿ ।
ಉದಧಿ ಈ ಗುರು ಮಹಾಜ್ಞಾನ ಜಲಕೆ ।
ಒಧಿರ ಬ್ರಹ್ಮನು ಮೂಕಳಾಸತನಸತಿಯು ।
ಇದು ಸತ್ಯ ಇದು ಸತ್ಯ ವಿವರಗ್ರುದಲ್ಲಿ........

ಮತ್ತೋ—

ಬಿದಿರರದು ಪಲ್ಲಕ್ಕಿ ಮಂಡಿತ ।
ಚದುರೆ ಶ್ರೀಯುಗಜಕುಂಭವಂ ।
ಕೆದರಿ ಹಿಡಿದೆಳೆತರುವ ಕರಪಲ್ಲವ ।
ವಿದನಾಚರಿಸಿಹುದು ಹೋ ಶ್ರವಣಿಸಿರಿ ।
ಬಿದಿರೆನ್ನ ಬಿರುದಿಗಲ್ತೆ ಮೂಲಾಧಾರಾ........!!

ಎಲ್ಲರು ಕರತಾಡನಮಾಡಿ ಸೈ, ಸೈ ಎಂದು ಕೂಗಿ ಗದ್ದಲಮಾಡಿದರು. ಇಷ್ಟರಲ್ಲಿ ಗುರುಗಳೂ ಕೂಡ ಎದ್ದು ಭಾಷಣಮಾಡಿ ಮುಗಿಸಿಬಿಟ್ಟರು. ಅಕ್ಕಪಕ್ಕದಲ್ಲಿದ್ದ ಶಿಷ್ಯಮಂಡಲಿಯವರೆಲ್ಲರೂ ಮುಂದೆ ಬಂದು, ಗುರುಗಳ ಆಜ್ಞೆಯಂತೆ "ವೇದಾಂತ ಡಿಂಡಿಮ," "ವೇದಾಂತ ಡಿಂಡಿಮ"ವೆಂದು ಏಳು ಸಾರಿ, ಕೈಯೆತ್ತಿ ಕೂಗಿದಹಾಗೂ, ಏಳು ಸಾರಿಯೂ ಗೋಪಾಲ ಕೃಷ್ಣರ ದೇವರ ನಗಾರಿಯ ಡಂಘಮ, ಡಂಘಮವೆಂದು ದಿಕ್ಕುದೆಶೆಯೆಲ್ಲ ಗುಡುಗಾಡಿಸಿ ಧನಿಗೊಟ್ಟಿತು.

ಇಂಥಾ ರಾಜಾಚಾರ್ಯರು ಪಾಠ, ಪ್ರವಚನ, ಹರಿಕಥಾ, ಕಾಲ ಕ್ಷೇಪ ಮತ್ತು ಪುಸ್ತಕ ಪ್ರಕಟನಗಳಿಂದ ಬೇಕು, ಬೇಡವೆನ್ನುವಷ್ಟು, ಧನ ಕನಕವಸ್ತುಗಳನ್ನು ಶೇಖರಿಸಿಟ್ಟರು. ಇವರಿಗೊಬ್ಬ ಪಂಡಿತ ಪುತ್ರನುದಯಿಸಿ ದನು. ವೇದಾಂತ ಡಿಂಡಿಮರು ತಮ್ಮ ಮಗನಿಗೆ ಬಾಯಿತುಂಬ ಬರುವ ಹೆಸರಿಡಬೇಕೆಂದು "ಶ್ರೀಕರ", "ಶಾಕಲ", "ಚಂದ್ರಕಾಂತಿ", "ಜೋತಿ ರ್ಲತೆ"—ಇವುಗಳನ್ನೆಲ್ಲಾ ಹುಡುಕಿ ವಿಫಲರಾಗಿ ತಾವು ಯೌವನದಲ್ಲಿ

ಬರೆದ "ಶೃಂಗಾರ ವನ ವೈಭವ"ದಲ್ಲಿಯೂ ಕಾಣದೆ, "ವ್ಯಾಖ್ಯಾನಜಿತ ವ್ಯಾಖ್ಯಾನ"ವೆಂಬ ತಮ್ಮ ಹೊಸ ಪುಸ್ತಕದ ಎಂಟನೇ ಖಂಡದಲ್ಲಿನ, ಏಳನೇ ಶಿಖಿಯಲ್ಲಿ ಪದಬಿಟ್ಟು ಪದವಾರಿಸಿ ಬಿಂಧು ಮಾಧವನೆಂಬ ಹೆಸರನ್ನು ಕಲ್ಪನೆ ಮಾಡಿ ಮಗನಿಗೆ ನಾಮಕರಣ ಮಾಡಿದರು.

ಪಂಡಿತ ಪುತ್ರ ಬಿಂದು ಮಾಧವನು ಪ್ರಾಪ್ತವಯಸ್ಕರನಾಗುವಲ್ಲಿಗೆ ತಂದೆಗೂ ಮಗನಿಗೂ ಎರಡು ಮೂರಂತಸ್ತು ಅಂತರವಿದ್ಧಂತೆ ಕಂಡುಬಂತು. ರಾಜಾಚಾರ್ಯರ ಮಂಡಿಯು ಮೇಲಣ ಪಂಚೆ ಬಿಂದು ಮಾಧವನ ಮಂಡಿ ಯನ್ನೆಲ್ಲ ತರೆದುಹಾಕಿತು. ಮೊಣಕಾಲು ಮುಚ್ಚುವ ಮೇಲುಕೋಟೇ ಪಂಚೆಯನ್ನುಟ್ಟವನು ಬಿಲ್ವಪತ್ರೆಯ ಬುರುಡೆಯೊಳಗಿಂದ ನಶ್ಯ ಏರಿಸಿ ಒರಸಿ ಕೊಳ್ಳಲಾದೀತೆ! ಇಲ್ಲ ಬರಿನಾರಿಕೇಳದ ಶಿಖೆಯನ್ನಿಟ್ಟರಾದೀತೋ! ಕಮಾನುಜುಟ್ಟು, ಬೆಳ್ಳಿಯ ನಶ್ಯದ ಡಬ್ಬಿ, ಮೇಲುಕೋಟೆ ಪಂಚೆ, ಮತ್ತೆ ಬಾಯಿತುಂಬ ಹೇಳಕೊಳ್ಳಲಿಕ್ಕೆ ಒಂದೆರಡು ಶೃಗಾಂರಶತಕದ ಶ್ಲೋಕಗಳು ಬೇಕಷ್ಟೆ! ಅಂತು ಬಿಂದು ಮಾಧವನು ನಾಗರಿಕನಾದನು.

ನಾಗರಿಕರ ಗುಂಪಿಗೆ ಸೇರಿದ ಬಿಂದು ಮಾಧವನು ಪಟ್ಟಕ್ಕೆಂದು ಬರುವನೋ ಎಂದು ಅವನ ನೆಚ್ಚಿನ ಗೆಳೆಯರು ಕಾದಿದ್ದರು.

ವೇದಾಂತ ಡಿಂಡಿಮ ರಾಜಾಚಾರ್ಯರು ಕೂಡ ಒಂದು ದಿನ ಸೊಸೆಯ ಕೈಲಿ ಬೀಗದಕೈ ಎಸಳನ್ನು ಕೊಟ್ಟು, ಹಿತವಚನಗಳನ್ನು ಹೇಳಿ ಮಗನುಓದಿದ ವಿಷ್ಣು ಪುರಾಣದ ಐದು ಶ್ಲೋಕಗಳನ್ನು ಕೇಳಿ ಕಣ್ಣು ಮುಚ್ಚಿದದೂ ಆಯಿತು.

ಸೊಂಕೂಬಾಯಿಗೆ ಟಪಾಲಾಫೀಸಿನ ಕಬ್ಬಿಣ ಪಟ್ಟಿಗೆಯ ವಿಚಾರ ವೆಲ್ಲ ಹೇಳಿ, ಅಸಲಿನ ಮೇಲಣ ಬಡ್ಡಿಯ ಆಸೆಯನ್ನು ತೋರಿಸಿ ಅಚ್ಚು ಮೆಚ್ಚಾಗುವಂತೆ ಮಾತಾಡಿ, ರಾಜಾಚಾರ್ಯರಿಟ್ಟಿದ್ದ ಐದು ಸಾವಿರ ನಗದು ರೂಪಾಯಿಗಳನ್ನು ಬಿಂದು ಮಾಧವನು ಪೆಠಾರಿಯಿಂದ ತೆಗೆದುಕೊಂಡು ಹೋಗಿಯೂ ಆಯಿತು........

ಶಂಕರಶುಂಠಿಯೆಂಬ ಆಪ್ತ ಮಿತ್ರನು ಬಿಂದು ಮಾಧವನಿಗೆ ಕಿವಿತುಂಬ ಸಿಹಿಮಾತಾಡಿ ಸಲಹೆಕೊಟ್ಟನು—"ಸುಮ್ಮನೆ ಟಪಾಲುಖಾನೆಯಲ್ಲಿ ಐದು ಸಾವಿರ ರೂಪಾಯಿಗಳನ್ನು ಇಟ್ಟರೇನು ಬಂತು! ಗಳಿಸಿದ ಹಣವನ್ನು

ಕೊಳೆಯಿಸಬಾರದಲ್ಲವೆ! ವ್ಯಾಪಾರ ಸಾಪಾರದಲ್ಲಿ ಉಪಯೋಗಿಸಿದರೆ ಒಂದಕ್ಕೆ ಹತ್ತು ಕೂಡುತ್ತದೆ.

ಶಂಕರಶುಂಠಿಯು ಪಂಚಾಂಗದಲ್ಲಿ ನೋಡಿಟ್ಟಿದ್ದನು. ಮಾಘ ಶುದ್ಧ ಪೌರ್ಣಮಿಾ ದಿನ ಜಡೇಶಂಕರನ ರಥೋತ್ಸವ ಮೇಗರಪೇಟೇಲಿ! ಅಲ್ಲಿಗೇಕೆ ಹೋಗಬಾರದು? ಒಂದು ರಾಟಿವಾಳೆ! ಒಂದೇ ರಾಟಿವಾಳೆಯಾದರೆ ಆಯಿತು! ಕುದುರೆ ಇರುತ್ತೆ; ಆನೆ ಇರುತ್ತೆ; ಕುರ್ಚಿ ಇರುತ್ತೆ. ಅಂತು ರಾಟಿವಾಳೆ ಮಾಡಿಸಿದರೆ ಆಯಿತು! ಏನು ಒಂದು ಮುನ್ನೂರು ರೂಪಾಯಿ ಸಾಕು. ಗಾಡಿ ಬಾಡಿಗ್ಗೆ ನಲವತ್ತು ರೂಪಾಯಿ. ಆಳಿಗೆ ಇಪ್ಪತ್ತು ರೂಪಾಯಿ ಸಾಕು. ಹತ್ತು ಕುದುರೆ ಹೊರಸುತ್ತು; ಮೂರಾನೆ, ಎರಡು ಹುಲಿ ಒಳಸುತ್ತು; ನಡುವಿಗೆ ಏಳು ಕುರ್ಚಿ ಒಟ್ಟು ಇಪ್ಪತ್ತೆರಡು ಜನ ಕೂರಬಹುದು. ಒಬ್ಬೊಬ್ಬರಿಗೆ ಆರಾರು ಕಾಸು; ಆರಾರು ಸುತ್ತು ತಿರುಗಿಸಿ ಇಳಿಸಿದರಾಯಿತು. ಗಂಟೆಗೆ ಇಂಥಾ ತಿರುಗಾಣಿಯು ಹನ್ನೆರಡೂ ಆಗದೆ? ಹಾಗೆಂದರೆ—ಒಂದು ಗಂಟೆಗೆ ಹನ್ನೆರಡು ಹನ್ನೊಂದಾಣೆಯು ಒಂದು ದಿನಕ್ಕೆ ಹನ್ನೊಂದೂ ಆಗದೆ? ಮತ್ತೆ ಹಾಗಾದರೆ-ಇಂಥಾ ಹನ್ನೆರಡು ಹನ್ನೊಂದು ಆಣೆಯ ಹನ್ನೊಂದು ಗಂಟೆಗಳು ದಿನಕ್ಕೆ—ಎಂದರೆ ಯೋಗ ಶಾಂತಿಯ ದಿನವೂ ಸೇರಿ—ಎಷ್ಟೊಂದಾದವು! ಅಂದ ಮೇಲೆ ಒಟ್ಟು ಉತ್ಪತ್ತಿ! ಬಿಂದು ಮಾಧವನಿಗೆ ಬಾಯಲ್ಲಿ ನೀರೂರಿತು. ಮುನ್ನೂರು ರೂಪಾಯಿ ಖರ್ಚು ಮಾಡಿದರೆ ಒಂದು ಸಾವಿರಕ್ಕೆ ಕಡಮೆಯಿಲ್ಲದೆ ಸಂಪಾದನೆ ಮಾಡಬಹುದಲ್ಲವೆ. ಜಾತ್ರೆಯು ಆರು ದಿನವೂ ಕೂಡ ರಾತ್ರಿ ಹಗಲು ತಿರಿಗಿಸಿದಾಯಿತು. ಕಡೆಗೆ ತೆಪ್ಪೋತ್ಸವದ ದಿನವೂ ಕೂಡ ಕೊಳದ ಬಳಿಯೇ ರಾಟಿವಾಳೆಯನ್ನು ನೆಟ್ಟರಾಯಿತು. ಹೀಗೂ ಹಾಗೂ ಯೋಚನೆಮಾಡಿ ಬಿಂದುಮಾಧವಾಚಾರ್ಯರು ಬಡಗಿಯನ್ನು ಹಿಡಿತರಿಸಿ ಸೊಂಕೂಬಾಯಿಗೆ ಗೊತ್ತಿಲ್ಲದಂತೆ ಏಕಾದಶಿಯ ಒಳಗೇ ರಾಟಿವಾಳೆಯನ್ನು ಮಾಡಿಸಿ ತ್ರಯೋದಶಿಯ ದಿನ ಜಾತ್ರೆಗೆ ಹೊರಟರು. ಸೊಂಕೂಬಾಯಿಯು ಮನೆಯಲ್ಲೇ ನಿಂತಳು. ಗಲಾಟೆ ನೂಕನುಗ್ಗಲಲ್ಲಿ ಗಂಡಸರ ಶೆರಗುಹಿಡಿದು ಹೋಗಲಾದೀತೆ. ಪ್ರಸಾದವು ಹೇಗಿದ್ದರೂ ಮನೆಗೆ ಬಂದೇಬರಬೇಕಷ್ಟೆ? ಅಷ್ಟು ಸಾಕು ದೇವರಲ್ಲಿರುವ ಭಕ್ತಿಗೆ!

ಮೋಗರಪೇಟೆಗೆ ಹೋದರು. ಶಂಕರಶುಂಠಿ ಜೋಯಿಸರು ಪರವಾನಗಿ ತರುವುದಕ್ಕೆ ಖಾವಂದರ ಗುಡಾರಕ್ಕೆ ಹೊರಟರು. ಇತ್ತಲಾಗಿ ರಾಟಿವಾಳೆಯನ್ನೆಲ್ಲ ಅಡ್ಡಾದಿಡ್ಡಿಯಾಗಿ ಸೇರಿಸುತ್ತಲಿದ್ದ ಜವಾನನ ಸಂಗಡ ಬಿಂದುಮಾಧವನು ಹಾರಾಡಿ ಹೋರಾಡಿ ಹುಲಿ ಕುದುರೆಗಳನ್ನು ಅಲ್ಲಸಲ್ಲದ ಕೀಲುಗಳಿಗೆ ಸೇರಿಸಿ ತಿರವು ತಿರುಗಿಸುವುದಕ್ಕೆ ಹೋಗಿ ವೈ ಕೈ ಕೀಲೆಣ್ಣೆಮಾಡಿಕೊಂಡು ಬೆರಳುಗಳನ್ನೆಲ್ಲ ಗಾಯಮಾಡಿಕೊಂಡನು ಇಷ್ಟರಲ್ಲೆ ಹುಡುಗರು, ಮುದುಕರು, ಪೋಕರಿ ಪುಂಡರು ಬಂದು ನೆರದೆನೆರದರು. ಬಿಂದುಮಾಧವನಿಗೆ ಆನಂದ! ರಾಟಿವಾಳೆಯ ಚೌಕಟ್ಟಿನಲ್ಲಿ ಬೇಡವಾದ್ದೆಂದು ತನಗೆ ತೋರಿದ್ದೊಂದು ಅಂಗೈಯ್ಯಗಲದ ಮತ್ತು ಮೊಳದುದ್ದದ ಹಲಗೆಯನ್ನು ತೆಗೆದು ಅದರ ಮೇಲೆ ಬೆಳ್ಳಿಯ ನಶ್ಯೇಡಬ್ಬಿಯೊಳಗಿನ ಸುಣ್ಣವನ್ನು ಬೆರಳಿಗೆ ಹಚ್ಚಿಕೊಂಡು ದೊಡ್ಡ ಅಕ್ಷರಡಲ್ಲಿ "ಬಿಂದುಮಾಧವ ರಾಟಿವಾಳೆ" ಯೆಂದೂ ಸಣ್ಣ ಅಕ್ಷರದಲ್ಲಿ—"ಆರೇಕಾಸು-ಆರು ಸುತ್ತು........" "ಬನ್ನಿ ಬನ್ನಿ"ಯೆಂದೂ ಬರೆದು, ಒಂದು ಗಳುವಿನ ತುದಿಗೆ ಮೊಳೆಗಳನ್ನು ಹೊಡೆದು ಗಳುವನ್ನು ತನ್ನ ಡೇರೆಯ ಮುಂದೆ ನೆಟ್ಟನು.

ಅಷ್ಟರಲ್ಲಿಯೇ ಡವಾಲಿ ಜವಾನನು ಬಂದು—"ಲೇಸನ್ ಲೇಸನ್" ಎಂದು ಕೂಗಿದನು. ರಾಟಿವಾಳೆಯ ಜವಾನನೆಂದ "ಲೇಸನ್ ತರಕ್ಕಾ ಡೋಸಿಗಪ್ಪ ಹೋಗಾರೆ"—ಡವಾಲಿ ಥಲಾಯಿತನಿಗೆ ಸಿಟ್ಟುಬಂದು ರಾಟಿಯ ನಡುಗಂಬವನ್ನಲ್ಲಾಡಿಸಿದನು. ಅಲ್ಲೊಂದು ಕುದುರೆ, ಇಲ್ಲೊಂದು ಆನೆ, ಹೀಗೆಲ್ಲ ಮಾಧವನ ಜೋಡಾಣಿಕೆಯ ಪ್ರಾಣಿಗೆಳೆಲ್ಲ ಉರುಳಿ ಬಿದ್ದುವು. ಸುತ್ತಲಿದ್ದವರು ಹೇಳಿದರು—"ಆಚಾರ್ರೇ—ಥಲಾಯಿತಗೇನಾದರೂ ಕೈಗಿಡಿರಿ" ಮಾಧವನು ನಾಲ್ಕಾಣೆಯನ್ನಿಡಹೋದನು. ಥಲಾಲಿಯು ಅದನ್ನವನ ಮೊಗದ ಮೇಲೆಸೆದು ಸಿಟ್ಟಾದನು. "ನಾನೇನು ಬಿಕ್ಷಕ್ಕೆ ಬಂದೇಂತಲೋ ಏನರೀ ಲೇಸನ್ ತೋರಿ!" "ಇಲ್ಲವೋ ಅಪ್ಪ, ಪರವಾನಗಿ ತರತಾನೋ ಶಂಕರಶುಂಠಿ. ಇಕ್ಕೊಳ್ಳೊ ಒಂದು ರೂಪಾಯಿ!"

ಇನ್ನಾರೋ ಹೇಳಿದರು—"ಏನ್ರಿ ತಿಳಿದೋರು ನೀವು! ಅಷ್ಟಿಷ್ಟೆಲ್ಲ ಖರಚಾಗುತ್ತೆ ಸಾಮಾನಿಗೆ ನಾಕಾಣೆಯಂತೆ ಕೊಟ್ಟರೇನರಿ ನಿಮಗೆ ಹೋಗೋದು. ಹುದ್ದೇದಾರ ಬಂದ್ರೆ ಒಂದಕ್ಕೆ ಹತ್ತು ಕೊಟ್ಟುಬಿಡುತೀರಿ!"

ಮಾಧವಾಚಾರ್ಯರು ಶಂಕರಶುಂಠಿಯನ್ನು ಶಾಪಿಸಿ ಡಲಾಲೀಗೆ ದುಡ್ಡು ಕೊಟ್ಟು ಕಳುಹಿಸಿದರು. ಆ ಲಂಚಕೋರ ಮೂಲೆತಿರುಗುವುದ ದಲ್ಲೇ-“ಜಡೆಶಂಕರನಾಟಕಾಣೋ! ಗುಮಾಸ್ತಗೆ ಹತ್ತತಂತೆ, ಹುದ್ದೆ ದಾರ್‍ರಿಗೆ ಇಪ್ಪತಂತೆ, ಇಲ್ಲದಿದ್ದರೆ ಲೇಸನ್ ಇಲ್ಲ, ಪರವಾನಗಿ ಇಲ್ಲ”. ಹೀಗೆಂದು ಕೂಗಿಕೊಂಡು ಶಂಕರಶುಂಠಿ ಬಂದನು ಮತ್ತೆ ಕಿವಿಯಲ್ಲಿ— “ಮಾಧು—ಹುದ್ದೇದಾರ್‍ರೆ ಬರತಾರೆ ಕಣೋ. ಬಂದಾಗ್ಗೆ ಚಲ್ಲಿ ಹೋದರೆ ಹೋಗಲಿ ಒಂದೈದು ರೂಪಾಯಿ, ಮಲ್ಲಿಗೇ, ಗುಲಾಬಿ, ಜಾಲಾರಿ ಹೂಗಳ ಸರಗಳನ್ನು ಹಾಕಿ ಅವರನ್ನು ಕೂರಿಸಿ, ತಿಳೀತೋ! ಗರ ಗರ ಗರ ತಿರುಗಿಸಿ ಬಿಡೋಣ. ಆಮೇಲೆ ಖುಸಿ, ಆದರೆ ಸರಕಾರಿ ಗುಮಾಸ್ತರೆಲ್ಲ ಒಂದೊಂದಾಣೆ ಕೊಡುತಾರಂತೋ ಕಾಣೋ? ಎಲ್ಲ ಊಟಾದ ಮೇಲೆ ಬರುತಾರೆ, ಖುಸಿ ಕಾಣೋ. ಎಲ್ಲಿ ದುಡ್ಡು ತಾ. ನೀವೆಲ್ಲ ರಾಟೆ ಹೊಡಿ, ಹಚ್ಚಿ ಹೊಡೀರಿ, ಎಲ್ಲೋ ಕಾಪಾಲೀ, ಮುದ್ದೇ ತಿಂದು ಬಾರೋ, ತಿರುಗಣೆ ನಿಲ್ಲಲೇ ಬಾರದು. ಆಕಾಶ ಭೂಮಿಯೆಲ್ಲ ತಿರುಗೀ ತಿರುಗೀ ತಿರಗಬೇಕು. ಈ ಜಾತ್ರೆಗೆ ಬಂದೋರನ್ನೆಲ್ಲ ಕೂರಿಸಿ ಗಿರಿಗಿರಿಗಿರಗಟ್ಟೆ ಮಾಡಿಬಿಡು. ಸೂರ್ಯ ಮಂಡಲ! ಎನ್ನಿಸಿಬಿಡು!” ಎಂದು ಹೇಳಿ ಶುಂಠಿ ಜೋಯಿಸನು ದುಡ್ಡಿನ ಚೀಲವನ್ನು ತೆಗೆದುಕೊಂಡು ಹುದ್ದೇದಾರಖಾವಂದರ ಗುಡಾರಕ್ಕೋಡಿದನು.

ಬಂದರು, ಬಂದರು ಬಲುಜನ ಬಂದರು. ಡಿಂಡಿಮ ರಾಜಾಚಾರ್ಯ ರನ್ನು ನೋಡದೆ ಇದ್ದವರಾರು! ಮೇಗರಪೇಟೆಗೆ ಆರೇ ಮೈಲಿಯಲ್ಲಿತಾನೆ. ಆಚೆ ಪಾದಹಳ್ಳಿ! ಅಲ್ಲೇ ಅಲ್ಲವೆ ಮಾಧೂಗೆ ಹೆಣ್ಣು ತಂದದ್ದು. ಬಂದೇ ಬಂದರು.—ನೆಂಟರು, ತುಂಟರು, ಕಂಡೋರು, ಕೇಳಿದೋರು, ಎಲ್ಲಾ ಬಂದು ಅಲೇ ಅಡಿಕೆ ಜಗೀತ “ತಿರುಗಿಸ್ಬೈಯ್ಯ ನಾವೆಲ್ಲ ನಿಮ್ಮೋರು, ರಾಜಾ ಚಾರ್ಯರೇನು ನಮಗೆ ದೂರದವರಲ್ಲ ಏನಯ್ಯ ಚಿರಂಜೀವಿ, ಮಾಧು ಬರುಕೊಳ್ಳಯ್ಯ ನಂದು ಹನ್ನೆರಡು ಸುತ್ತು! ಆಚಾರ್‍ರೆ ನಂದು ಮೂವ ತ್ತಾರು! ಬಿಂದುಮಾಧವಾಚಾರ್‍ರೇ ನಮಗೂ ಕಾಸೋ ಏನ್ರಿ ಈ ಹೊತ್ತು ಪರವಾನಗಿ ಸಿಕ್ಕದೇ ನೇತುಹೊಡೀತಿರುವಾಗ್ಗೆ, ಆ ಭಂಡಾಟ ತಪ್ಪಿಸಿದೋನು ನಾನಲ್ಲವೇ? ನನಗೂ ಕಾಸೋ? ಇಷ್ಟರ ಮೇಲೆ ಬರಕೊಳ್ಳಿ, ಹೂ ನೇಪಾಳ ತಿರುಗಿಸೋ ಹಚ್ಚಿ ಹೊಡೀ ಹಾ—ಆ—ಬೇಶ್.”

ರಾಟವಾಳಿಗೆ ಪುರುಸತ್ತೇ ಇಲ್ಲ. ತೆಪ್ಪೋತ್ಸವದ ದಿನವೂ ಅದು ತಿರುಗಿತು. ಕೊಳದ ಬಳಿ ಗಿರಾಕಿ ಹೆಚ್ಚು. ಮಾಧವಾಚಾರ್ರೀ ಶುಂಠಿಯ ಬುದ್ಧಿಯವರೀರಿಗೆ ಜನರನ್ನು ಮರುಳು ಮಾಡಲಿಕ್ಕಾಗಿ ನಿಂತರು. ಕುಳಿತವರೆಲ್ಲರ ಕರವಸ್ತ್ರಗಳಿಗೆ ಗಂದದೆಣ್ಣೆಯ ತಟುಕನ್ನು ಹಚ್ಚುವುದಕ್ಕೆ ಆರಂಭಿಸಿದರು. ರಾಟೆಯು ತಿರುಗಿ ತಿರುಗಿತು, ತಿರುಗಿಸಿದವರ ರೆಟ್ಟೆ ಮುರಿಯಿತು. ಜಾತ್ರೆಯೆಲ್ಲ ಕಳೆಯಿತು ಮತ್ತು ನಾಲ್ಕು ದಸ್ತಿನ ಮೂರು ಲೆಕ್ಕದ ಪುಸ್ತಕಗಳು ತುಂಬಿದವು. ಅಷ್ಟೂ ಅಷ್ಟು ಗಿರಾಕಿಗಳ ದೇಣ್ಣಿಲೆಕ್ಕ. ಎಲ್ಲರೂ ಗುರುತಿನವರೆ, ಎಲ್ಲರೂ ರಾಜಾಚಾರ್ಯರನ್ನು ಕಂಡು ಕೇಳಿದವರೇ, ಅಂತು ಎಲ್ಲ ಬರುವ ದುಡ್ಡೇ ಸರಿ. ಎಲ್ಲಾ ಖಾತ್ರಿ ಕುಳಗಳು. ಅಂತು ಹಣವೆಲ್ಲ ಇತ್ತು........ಲೆಕ್ಕದಲ್ಲಿ! ಕೈಲಿ ತಂದಿದ್ದ ಐನೂರು ರೂಪಾಯಿಗಳೂ ವಿನಿಯೋಗವಾದವು. ಶಂಕರಶುಂಠಿ ಜೋಯಿಸ: ಹೇಳಿದ— "ಮಾಧು ನಿನೇಕೋ ಪೆಚ್ಚಾದೆಯಲ್ಲ. ನೀನೋದಿದ್ದೆಲ್ಲ ಏನಾಯಿತು ಹೇಳು. ಒಂದು ಸಾರಿ ಬರದಿದ್ದರೆ ಇನ್ನೊಂದು ಸಾರಿ ಬರುತ್ತೆ. ಅದೇನೋ ಪುಸ್ತಕದಲ್ಲಿಲ್ಲದೆ -ಚಕ್ರನೇಮಿ ಕ್ರಮೇಣ-ಅಂತ, ಹಾಗೆ ಒಂದು ಸಾರಿ ಮೇಲೆ, ಇನ್ನೊಂದು ಸಾರಿ ಕೆಳಗೇ—ಅಂತೂ ಸಾವಿರ ಸಾರಿ ಹೇಳು. ಈಗ ಸೋತದ್ದೇ ಒಳ್ಳೇದು ನೋಡು. ಮೊದಲು ಕಹಿ, ಆಮೇಲೆ ಸಿಹಿ! ಅವರೆಲ್ಲರೂ ಕೊಡದೇ ಎಲ್ಲಿ ಹೋದಾರು ನನ್ನ ಜತೆಗೊಂದಾಳು ಒಂದು ಬಂಡಿ ಕೊಡು. ಎಲ್ಲಾ ಹಳ್ಳಿ, ಹಳ್ಳಿ ಸುತ್ತಿ, ತಿರುಗಣೆಯ ಬಾಕಿಯನ್ನೆಲ್ಲಾ ತಿರುತಿರುಗಿ ವಸೂಲು ಮಾಡಿ ತಂದೇ ತರುತ್ತೇನೆ!"

ಅಂತು ಆ ರಾಟವಾಳಿಯನ್ನು ಮಾಡಿಸಹತ್ತಿದ್ದು ಒಳ್ಳೆಯ ಮುಹೂರ್ತವಲ್ಲವೆಂದು ಅದನ್ನು ಒಬ್ಬ ಮುಸಲ್ಮಾನ ಸಾಹೇಬನಿಗೆ, ಇಪ್ಪತ್ತೈದು ರೂಪಾಯಿಗೆ ಕೊಟ್ಟುಬಿಟ್ಟು ಆಳಿನ ಸಂಬಳವನ್ನೂ ಗಾಡಿಯ ಬಾಡಿಗೆಯನ್ನೂ ತೆತ್ತು ಬಿಂದುಮಾಧವನು ಜಡೇಶಂಕರನ ಪ್ರಸಾದವನ್ನು ತೆಗೆದುಕೊಂಡುಬಂದು ಸೊಂಕೂಬಾಯಿಗೆ ಕೊಟ್ಟುಬಿಟ್ಟನು. ಜಾತ್ರೆಗೆ ಹೋಗಿದ್ದ ರಾಟವಾಳಿಯ ವಿಚಾರದ ಕಂಪಂತೂ ಸೊಂಕು ಬಳಿ ಸುಳಿಯಲೇ ಇಲ್ಲ.... ....ಚೈತ್ರ ಮಾಸದಲ್ಲಿ ನರಸಿಂಹ ದೇವಸ್ಥಾನಕ್ಕೆ ಶಂಕರಶುಂಠೀಜೋಯಿಸನು ಬಂದು ಸುಳಿದಾಡುತ್ತಿದ್ದು, ಬಿಂದುಮಾಧವನನ್ನು ಕೈಹಿಡಿದು ಕರೆದೊಯ್ದು

ಏನೇನೋ ಊದಿದನು. ಮಾಧೂ ನಕ್ಕನು—"ಚಕ್ರನೇಮಿ ಕ್ರಮೇಣ ಅಷ್ಟೇ ಧೈರ್ಯವಿದ್ದರೆ ಭಾಗ್ಯ ಅಷ್ಟೆ." ಎಂದಿಷ್ಟೇ ಗಟ್ಟಿಯಾಗಿ ಹೇಳಿದನು.

ವೈಶಾಖ ಶುದ್ಧ ಸಪ್ತಮಿಯ ದಿನ ಕಿರುಕುವಾಳಿಯಲ್ಲಿ ಭಾರಿ ಪರಿಸೆ. ಏನು ಜಾತ್ರೆ, ಎಷ್ಟೊಂದು ಜನ! ಅಷ್ಟಾದರೂ ಕೂಡ ನೀರು ನೆರಳಿಲ್ಲದೆ ತಿಂಡಿತೀರ್ಥವಿಲ್ಲದೇ ಜನ ಅಲೆದಾಡಿ ಬಡಿದಾಡುತ್ತಿದ್ದರು. ಅಲ್ಲಿಗೆ ಹೋಗಿ ಆ ದೇವರ ಸನ್ನಿಧಿಯಲ್ಲಿ ಬೇರೆಯವರ ಅವರಟ್ಟಿಗೆಗೆ ಅಪ್ಪಣೆ ಕೊಡದಹಾಗೂ, ಸಂತರ್ಪಣೆಗೆ ಸೌದೆ ಸಿಗದ ಹಾಗೂ ಮಾಡಿ, ಆ ಬಟ್ಟಬಯಲಲ್ಲಿ ಒಂದು ಹೋಟಲಿಟ್ಟರೆ ದುಡ್ಡು ಸುರಿದು ಹೋಗುತ್ತೆ. ಒಂದು ಲೋಟ ಬರೀ ನೀರಿಗೇ ಮೂರು ಕಾಸು! ಉಳಿದುದಕ್ಕೆ ಕೇಳಬೇಕೇ. ಕಾಸಿನ ಸೂರೆ ಯಾಗುತ್ತೆ, ಮತ್ತೆ ದುಡ್ಡಿನ ಮಳೆಯೇ ಸುರಿದುಹೋಗುತ್ತೆ. ಚಪ್ಪರವನ್ನು ಮಾತ್ರ ಎಲ್ಲರೂ ಸೇರುವ ಕಡೆಯೇ ಹಾಕಬೇಕು. ಈ ಸಾರಿ ಮಾತ್ರ ಹೋದ ಸಾರಿಯ ಮಾಡಿದಹಾಗೆ ಮಾಡದೆ, ಒಳ್ಳೆಯ ಮುಹೂರ್ತವನ್ನು ನೋಡಿ ಕಂಬವನ್ನು ನೆಡಿಸಬೇಕು. ಅಂತೂ ಬಿಂದುಮಾಧವನೂ ಶಂಕರ ಶುಂಠೀ ಜೋಯಿಸನೂ ಕುಳಿತು ಮಸಲತ್ತು ಮಾಡಿದರು. ಇನ್ನೇನು ಎಲ್ಲಾ ಗುಟ್ಟಾಗಿರಬೇಕು. ಹೋದಸಾರಿಯ ಹಾಗೆ ಗುಟ್ಟು ರಟ್ಟಾಗ ಬಾರದು. ಜಾತ್ರೆಗೆ ಬಂದವರಿಗೆ ಮಾತ್ರ ಆಶ್ಚರ್ಯವಾಗಬೇಕು—ಅಡಿಗೆ ಯಾಳು ನಾಲ್ಕು, ಎತ್ತಿನ ಗಾಡಿ ಮೂರು ಆಗಬೇಕು. ಎಲ್ಲ ಸ್ವಂತವೇ ಆಗಬೇಕು. ಸಾಮಾನೆಲ್ಲಾ ಪಾಗಡೀಪುರದಿಂದಲೇ ಹೋಗಬೇಕು. ಸಾಮಾನೆಲ್ಲಾ ಇಲ್ಲೇ ಅಗ್ಗ.

ಚೌತೀ ದಿನ ರಾತ್ರಿಯೆಲ್ಲಾ ಗಾಡಿಗಳನ್ನು ಕಟ್ಟಿಸಿ ಹೊರಟರು. ಎರಡು ಗಾಡಿಗಳ ತುಂಬ ಸಾಮಾನು ಮುಂದೆ ಹೋಗಿತ್ತು. ಸಾಮಾನಿನ ಜತೆಗೆ ಇಬ್ಬರು ಅಡಿಗೆಯವರು, ನಾಲ್ಕು ಆಳುಗಳು ಹೋಗಿದ್ದರು. ಚೌತೀ ದಿನ ಬಿಂದುಮಾಧವನು ಸೊಂಕೂಬಾಯಿಗೆ ಹೇಳಿದನು. "ಎಲೇ ಇದ್ದೀ ಯೇನೇ ಅಲ್ಲಿ? ಕೇಳಿದ್ದೀಯ ಶೇಕದಾರ್‍ರ ಕಿರುಕುಳ. ನಮ್ಮ ಜಮಾನರು ನಮ್ಮನ್ನ ದೊಡ್ಡವರನ್ನಾಗಿ ಮಾಡಿಟ್ಟು ಹೋಗಿದ್ದಾರೆ. ಆದ್ದರಿಂದ ತಿಳಿತೇ, ಹೋಗಬೇಕು ಶೇಕದಾರ್‍ರ ಸಂಗಡ! ಕಿರುಕುವಾಳದ ಜಾತ್ರೆಗೆ ಹೋಗಿ ಬರುತ್ತೇನೆ. ಮನೇಕಡೆ ಜೋಕೆ. ಬರೋದು ಎರಡು ದಿನ ತಡವಾದರೂ,

ನೆರಮನೆ ಬೆನಕಣ್ಣಯ್ಯನ ಮಗ ಜಾನಕಪ್ಪ ಇದ್ದಾನಲ್ಲ—ಸಾಮಾನು ಗೀಮಾನು ಅವನಿಂದ ತರಿಸಿಕೋ. ಎನೇ ತಿಳೀತೋ, ಹೊರಡಲೋ" ........ಹೀಗೆ ಸೊಂಕೂಗೆ ಮುಂಕುಬೂದಿ ಹಾಕಿ ಹೊರಟನು. ಬಿಂದುವಿನ ಆಸೆಯೆಂದರೆ ಹೀಗೂ ಹಾಗೂ ಮಾಡಿ ಐದು ಸಾವಿರ ರೂಪಾಯಿಯನ್ನು ಒಳ್ಳೇ ಫಲವತ್ತಾದ ಕಡೆ ಬಿತ್ತಿ, ಕಡೆಗೆ ಒಂದು ಐವತ್ತು ಸಾವಿರವನ್ನಾದರೂ ಮಾಡಿ ಸೊಂಕೂಬಾಯಿಯ ಮುಂದೆ ತೆಗೆದೊಯ್ದು ಸುರಿಯಬೇಕೆಂಬುದು.

ಹೆಂಗಸರಿಗೆ ಟಪಾಲಖಾನೆಯೆಂದರೆ ಎಷ್ಟೋ, ಖರ್ಚು ಖಾನೆ ಯೆಂದರೂ ಪೋಲೀಸು ಠಾಣೆಯೆಂದರೂ ಅಷ್ಟೇ ಅರ್ಥವಾಗುವುದು. ಕಡೆಗೆ ಒಂದೇ ಬಾರಿಗೆ ತಿಳಿಸಿದರಾಯಿತು. ಅಂತೂ ಕಿರಕುವಾಳದಲ್ಲಿ ಸಂಪಾದನೆ ಯಾಗಬೇಕು. ಆಗದೆ ಏನು ? ಬಟ್ಟಬಯಲು. ನೀರು ನೆರಳಿಲ್ಲದ್ದ ಜಾಗ. ಸ್ವಂತ ಗಾಡಿಗಳಿಂದ ನೀರು ಸಾಗಿಸುವವರಿಗೆ ಎಷ್ಟು ದೂರವಾದರೇನು ? ಹೋಟಲಿಟ್ಟವರಿಗೆ ಕಷ್ಟವಿಲ್ಲ. ಸುತರಾಂ ಸುಲಭ. ತಿಂಡಿಯ ಆಶೆಗೆಂದರೇ ಎಷ್ಟೋ ಜನ ಬಂದು ಕೆಲಸಮಾಡಿ ಹೋದಾರು. ಅಂತೂ ಪಾಗಡೀಪುರ ದಿಂದ ಹೊರಟವರು ಚಪ್ಪೇನಹಳ್ಳೀಲಿ ಉಳಿದು ಊಟ ತೀರಿಸಿಕೊಂಡು ಹೊರಟರೆ ನೆಟ್ಟಗೆ ಕಿರುಕುವಾಳವೇ ಸರಿ........

ಶಂಕರಶುಂಠಿಯು ಇಸ್ಪೀಟಿನ ಎಲೆಗಳನ್ನು ಕಲಿಸಿ ಹಾಕಿದನು. ಆಟ ಸಾಗುತ್ತಿತ್ತು ನಡುವೆ ಬಿಂದು ಹೇಳಿದ "ನೋಡು ನೋಡು ಆಠೀನ್ ಜಾಕೀನ ಹಾಗೆ ಕತ್ತರಿಸುತ್ತಾರೋ!" ಆಗ ಶಂಕರ ಹೇಳಿದ ಹಾಗಾದರೆ ನೀನು ಸೋಲುವ ಕಾಲ ಬಂದರೆ, ನಿನಗೆ ಇಲ್ಲದ ಸಿಟ್ಟು. ಹೋಗಲಪ್ಪ ಬಿಸಾಡು ಎಲೇನ!........ಇನ್ನೊಂದಾಲೋಚನೆ ಬಂತು ಈಗ. ಕಿರಕುವಾಳ ಗ್ರಾಮಕ್ಕೆ ಹೋದೆವೆಂತಲೇ ತಿಳಿ. ಅಂಗಡಿ ಹೂಡೋಕ್ಕೆ ಏನಿದೆ. ಇಲ್ಲೇ ಒಂದಿಷ್ಟು ಬೂಂದಿ, ಪಕೋಡಮಾಡಿಸಿ ಗೂಡೇಲಿ ತುಂಬಿಸಿ ತೆಗೆದುಕೊಂಡು ಹೋಗ ಬಾರದೇ! ಅಲ್ಲಿ ಪತಗಳಿದ್ದೇವೆ. ತುಂಬಿದಾ ಇಟ್ಟ! ಬಿಂದೂ! ಲೇ ಮಾಧೂ! ಒಂದು ಬೋರ್ಡ್ ಇಲ್ಲಲ್ಲೋ! ಆಸಾರಿ ನೀನು ನನ್ನ ಹೆಸರೇ ಬಿಟ್ಟಿದ್ದೆ. ಈಸಾರಿ ನೋಡು ನಾವಿಬ್ಬರೂ ಒಂದೇ ಬೆಟ್ಟದ ಮೇಲಿಂದ ಉರುಡಿಬರುವ ಕಲ್ಲು ಗುಂಡುಗಳಾಗಿದ್ದೇವೆ ಅಲ್ಲವೇ! ಈಸಾರಿ ಬೋರ್ಡಿ ನಲ್ಲಿ ಮಾತ್ರ—"ಜಿಹ್ವಾನಂದ ಹೋಟಲ್-ಶಂಕರಬಿಂದೂ ಕಂಪನಿ-ಎಂತ

ಬರೆದಿಡಬೇಕು ತಿಳೀತೋ—ಸರೀ, ಮಾಧೂ, ಸಕ್ಕಡಿ ತಂದಿದ್ದೀಯ,. ಅಂತು ನಿನ್ನ ಕೆಲಸವೆಲ್ಲ ಹೀಗೇ, ಏರುಪೇರು ಎಲ್ಲ! ಲೋ ಪಾಪಯ್ಯ, ಓಡೋಡಿಹೋಗಿ ಪಾಗಡೀಪುರದಲ್ಲಿ ಬಂಕಪ್ಪ ಶೆಟ್ಟರಿದ್ದಾರಲ್ಲ, ನಾನು ಲೆಕ್ಕಬರೀತಿನಲ್ಲೊ ಅಲ್ಲಿ. ಒಂದು ತಕಡಿ, ಒಂದು ಸೇರುಗಲ್ಲು. ಎರಡು ಅಚ್ಚೇರುಗಲ್ಲು, ಮೂರು ಅರಪಾವುಗಲ್ಲು ಇಸುಗೊಂಡು, ಮಚ್ಚರ್ ಖಾನ್ ಸಾಬೀ ಅಂಗಡೀಲಿ, ಈ ಚೀಟಿ ಕೊಟ್ಟು, ಒಂದು ಡೋರ್ಡು ಬರೆಸಿ ಕೊಂಡು ಓಡಿಬರಬೇಕು— ರಾತ್ರಿ ಹೊರಡುವುದರೊಳಗೇ ಬರಬೇಕು, ತಿಳೀತೋ-ನಡುವೆ ಎಲೆಗಿಲೆ ಜಗೀತ ನಿಂತುಗಿಂತೀಯೋ! ”........

ಶಂಕರಶುಂಠಿಯಂಥಾ ಅಚ್ಚುಮೆಚ್ಚಿನ ಗೆಳೆಯರಿರುವಾಗ ಮಾಧೂ ಗೇನು ಕಡಿಮೆ, ಆತನಾನಂದಕ್ಕೆ ಪಾರವೇ ಇಲ್ಲ. ಅಂತು ಶುಂಠಿಯು ಕುರುಡನಂತೆ ಕೋಲು ಕುಟ್ಟಿ ನಡಿಯುವನೇ ಹೊರತು, ತಾನು ಕಣ್ಣು ಬಿಟ್ಟು ನಡೆಯಲಾರ, ಯಾಕೆಂದರೆ, ತಾನೇ ಏನಾದರೂ ಸಲಹೆ ಹೇಳಿದರೆ,- ಪ್ರಿಯಗೆಳೆಯನ ಕಣ್ಣನ್ನು ನಂಬಿದಂತಾಗಲಿಲ್ಲ. ಆದ್ದರಿಂದ ಶಂಕರ ಹೇಳಿ ದಂತೆ ಮಾಧು ಕುಣಿಯುತ್ತ ಬಂದನು.

ಸರಕಾರಿ ಅರವಟ್ಟಿಗೆ ಈಸಾರಿ ಇಲ್ಲವೇ ಇಲ್ಲ. ಛತ್ರದಲ್ಲಿ ಅಡುಗೆ ಗಾಗಿ ಬಂದಿದ್ದ ಉಡುಪಿ ಬ್ರಾಹ್ಮಣರೆಲ್ಲರೂ, ಶಂಕರ ಬಿಂದೂ ಕಂಪನೀಲಿ, ಬೂಂದೀ ಕರಿಯಲು ನಿಂತರು. ಅಂತು ಯಾರಿಗೆ ನೀರೂ, ನೆರಳು, ತಿಂಡಿ, ತೀರ್ಥ ಬೇಕಾದರೂ, ಶಂಕರಬಿಂದೂ ಕುಂಫಿಣೀಗೇ ಬರಬೇಕಾಯಿತು.

ರಥವನ್ನು ಹಿಂದಿನಿಂದ ನೂಕುವುದಕ್ಕೆಂದು ಎರಡು ಆನೆಗಳನ್ನು ತರಿ ಸಿದ್ದರು. ಹುದ್ದೇದಾರರು ಖುದ್ದಾಗಿ ಮಾಧವಾಚಾರ್ಯರನ್ನೇ ಭೇಟಿ ಮಾಡಿ—ಆನೆಗೆ ನೀರು ದೊರಕುವಂತೆ ಮಾಡಿ, ರಾಯರೇ ”—ಎಂದು ಕೇಳಿಕೊಂಡಿದ್ದರು. ದೇವರ ಸೇವೆಗೆ ಬಂದ ಆನೆಗಳಿಗೆ ನೀರೂ ಕೊಡ ದಿದ್ದರೆ ಹೇಗೆ? ಕೊಡಬೇಕು ಪಾಪ—! ಅಂತು ಆನೀರು ದಿನಕ್ಕೆ ನಾಲ್ಕು ಬಾರಿ ಬೇಕಾಯಿತು. ಎಂಟೆಂಟು ಬಂಡಿಗಳ ನೀರೇ ಬೇಕಾಯಿತು. ಬಿಂಧವಾಚಾರ್ರು ಮಾತಾಡಿದರುಂಟೆ. ಹುದ್ದೇದಾರ್ರು ಶಂಕರ ಬಿಂದೂ ಕಂಪನಿಯವರ ಅನುಕೂಲಕ್ಕಾಗಿ, ಈಸಾರಿ ಅವಟ್ಟಿಗೆ ಮತ್ತೂ ಭೋಜನ ಕೂಟಗಳ ಮಾತೇ ಇಲ್ಲದ ಹಾಗೆ ಮಾಡಿಬಿಟ್ಟಿದ್ದಾರೆ. ಆದುದರಿಂದ

ಹುದ್ದೇದಾರರಿಗೆ ಬೇಕುಬೇಕಾದ್ದೆಲ್ಲ ಜಿಹ್ವಾನಂದದಿಂದಲೇ ಸಾಗಬೇಕು. ಅಂಗಡಿ ಭಾರಿ-ಆದ್ದರಿಂದ,—ಗುಳೋವು, ಗುಂಡಾರು, ಕನಡಿ, ಕಾಂಗಡಿ ಚುಂಗಡಿ, ಸಿಂಗಡಿಗಳ ಸಿಂಗಾರವೇನು ಕೇಳಬೇಕೆ! ತಿಂಡಿಗಳೋ-ತರಹೇವಾರಿ—ಸಿಂಗಾಳ, ಸುತ್ತುಂಡೆ, ಸಿಂಧೂರ ಮೊದಲುಗೊಂಡು-ರಸಗೊಳ್ಳ, ಬಿಡಿಸಿಂಬೆ, ಸುತ್ತುಂಡೆ, ಸೀಕಂಡ, ನಿಕುರುಂಬ ಮಧ್ಯವಾಗಿ, ಥರಥರದ ಮುರುಬ್ಬ, ಚಿರೋಟಿ, ಫೇಣಿಗಳು! ಇವೆಲ್ಲ ಪರಾತಗಳಲ್ಲಿ ತುಂಬಿ ತುಂಬಿ, ಚಪ್ಪರದ ಮೇಲು ಕಟ್ಟನ್ನೇ ಚುಂಬಿಸುತ್ತ ನಿಂತಿದ್ದವು. ತಕಡಿಗೂ ತೂಕದ ಕಲ್ಲುಗಳಿಗೂ ವಿರಾಮವೆಲ್ಲಿ? ವ್ಯಾಪಾರಕ್ಕೆ ಕುಳಿತಿದ್ದವನೊಬ್ಬ ಅನುಭವಸ್ಥ. ಅವನೆಲ್ಲಿಂದಲೊ ಬಂದವನು—ಬಿಂದುಮಾಧವನ ಭಾಗ್ಯದ ನಕ್ಷತ್ರವಾಗಿ, ಅಂಗಡಿಯ ಮೇಲೆ ಕುಳಿತಿದ್ದನು. ಕೆಲಸಗಾರರಿಗೂ ಕೂಲಿಗಾರರಿಗೂ, ಆಳುಕಾಳುಗಳಿಗೂ, ದುಡ್ಡುಕೊಟ್ಟು ಪೂರೈಸುವುದು ಸಾಧ್ಯವಿಲ್ಲವೆಂದು ಶಂಕರಶುಂಠಿಯು, ಅವರಿಗೆಲ್ಲ ತಿನ್ನುವಷ್ಟು ತಿಂಡಿಯನ್ನೂ ಏರ್ಪಾಡು ಮಾಡಿದ್ದನು.

ಅಂಗಡಿಯೆಲ್ಲ ಕೆಲಸಗಾರರಿಂದ ತುಂಬಿ ಗಿಜಗಿಜವೆನ್ನುತ್ತಲಿತ್ತು. ಗದ್ದಲ, ಗಸ್ತುವಾರಿ, ಉಸ್ತುವಾರಿಗಾಗಿ, ಬಿಂದುಮಾಧವಾಚಾರ್ರ್ರು, ಹುದ್ದೇದಾರರ ಕಡೆಯ ಹಿರಿಯಾಳುಗಳನ್ನೇ ನೇಮಿಸಿದ್ದರು. ಇನ್ನೇನು ಕೇಳಬೇಕೆ—ತಿನ್ನುವ ಹಲಗೆಗಳ ಮೇಲೆ ಕುಳಿತಿದ್ದುದೆಲ್ಲ-ಶಿಂಬೆ ರುಮಾಲೇ, ಜರತಾರಿ ಶಾಲೇ! ಯಾವುದಕ್ಕೂ ಕಡಿಮೆ ಇರಲಿಲ್ಲ ಶಂಕರಬಿಂದು ಕಂಪನಿಯ ಕೀರ್ತಿಯೆಲ್ಲೆಲ್ಲೂ ಹರಡಿ, ಎರಡು ಮೂರನೆ ದಿನಗಳಲ್ಲಂತು, ಬರಲಾರದೆ ಇದ್ದವರೆಲ್ಲ ಬಂದು ಹಾಜರಿ ಕೊಟ್ಟರು. ಹುದ್ದೇದಾರರ ಹೇಳಿಕೆ ಮೇರೆಗೆ ಬಂದವರೆಲ್ಲ, ತಿಂದವರೆಲ್ಲ ತಮ್ಮ ತಮ್ಮ ಅಭಿಪ್ರಾಯಗಳನ್ನೆಲ್ಲ ಬರೆದಿಡಲಾಗಿ, ಒಂದು ಪುಸ್ತಕವನ್ನೂ ಒಂದು ಲೇಖಣಿಯನ್ನೂ, ಒಂದು ದೊಡ್ಡ ದೌತಿಯನ್ನೂ, ಒಂದಿಷ್ಟು ಹಸೀಕಾಗದವನ್ನೂ ಒಂದು ಕಡೆ, ಮೇಜಿನ ಮೇಲೆ ಇಟ್ಟೂ ಆಯಿತು.

ಆ ಪುಸ್ತಕದಲ್ಲಿ ಬರೆದವರೆಷ್ಟುಜನ! ಅಂಥಾದ್ದು ದಿನಕ್ಕೆ ಎರಡು ಪುಸ್ತಕಗಳೂ ಸಾಲದೆ ಬಂದವು. ಲೆಕ್ಕದ ಪುಸ್ತಕಗಳಾದರೊ ಅಷ್ಟೊಂದಾಗಿ ತುಂಬಲಿಲ್ಲ. ಸೈ ಸೈ ಸೈ ಸೈ, ಎಂದು ಎಲ್ಲರೂ ಬಂದು ಬಿಂಧುಮಾಧವನ

ಭುಜತಟ್ಟಿ ಹೋಗುವವರೇ ಹೆಚ್ಚು ಆತುರಪಟ್ಟು ಬಂಟ ಬೀಳುವ ಗಿರಾಕಿ ಪತಂಗಗಳನ್ನು ನೋಡಿ, ಶಂಕರನು ಹಿಗ್ಗಿ ಹೀರೇಕ್ಶಾಯಾಗಿ, ಬಿಂದುವಿಗೆ ಕೈಸನ್ನೆಮಾಡಿ ಹಸರಿನ ಬೋರ್ಡನ್ನು ತೋರಿಸುವನು—"ಹಿ ಹಿ ಹೀ! ಈಸಾರಿ ಬರೀ ಬಿಂದುವಲ್ಲ, ಶಂಕರಬಿಂದೂ!"

ಅಂತು ಎಲ್ಲ ಮುಗಿಯಿತು. ಖರ್ಚುಪಟ್ಟಿಯ ತುದಿಗೆ, ಒಂಭೈನೂ ರೊಂಭತ್ತುರುಪಾಯಿ, ಒಂಭತ್ತು ಆಣೆ, ಒಂಭತ್ತು ಕಾಸು, ಬಿತ್ತು. ಆದಾಯವೆಲ್ಲ ಸರಸ್ವತಿ ಪ್ರಸನ್ನ ನಿತ್ಯ ತಿಂಡಿ ತಿಂದವರಲ್ಲಿ—ಅರ್ಧಪಾಲು ಜನ, ಕೆಲಸಗಾರರು, ನೀರು ತುಂಬಿದವರು, ತಂದವರು, ಮತ್ತು ಇಳಿಸಿ ದವರು, ಅಳಿಮುಕೊಟ್ಟವರು, ನಿಗಾನೋಡಿದವರು, ಬಂಡಿ ಹೊಡೆದವರು, ದಾರಿ ಬಿಡಿಸಿದವರು, ಚಕ್ರಗಳ ಕಡಾಣಿಗಳನ್ನು ಯಾರೂ ತೆಗೆಯದಹಾಗೆ ನೋಡುತ್ತ ದಾರಿಯುದ್ದಕ್ಕೂ, ಗಾಡಿಗಳೊಂದಿಗೆ ಹೋಗಿ ಬಂದವರು, ಹೀಗೆ ನೀರಿನ ಸಿಬ್ಬಂದಿಯವರೇ ಮೂವತ್ತುಜನ. ಇನ್ನು ಅಂಗಡಿಗೆ ಗಿರಾಕಿಗಳನ್ನೊದಗಿಸುತ್ತ, ಬೀದಿಯಲ್ಲಿ ನಿಂತವರು, ತೂಗಿದ ತಿಂಡಿಯನ್ನು ಹಾಕಿಕೊಡಲು ಪೊಟ್ಟಣ ಸರಬರಾಜುಮಾಡುತ್ತ ನಿಂತವರು, ಹುಶಾರಿ ನೋಡುವವರೇ ಮೊದಲಾಗಿ ಅಂಗಡಿಗೇ ಇಪ್ಪತ್ತಾರುಜನ, ಇನ್ನೂ, ಕರಿಯೂವಾಗ ಒಲೆದೂಡುವವರು, ಸೌದೆ ತರುವವರು, ಲೆಖ್ಖ ಬರೆ ವವರೂ—ಇವರೆಲ್ಲ ಬೇಡವೆಂದರೆ ಹೇಗೆ! ಅಂತು ಎಲ್ಲರೂ ಬೇಕಾದ ಸಿಬ್ಬಂದಿಯೇ. ಹೀಗೆ ಸಿಬ್ಬಂದಿಗಳೆಲ್ಲ ಸೇರಿ, ನಿತ್ಯ ತಿಂಡಿ ತಿನ್ನುವವರು, ಸುಮಾರು ಇನ್ನೂರುಮಂದಿ, ಕಡೆಯದಿನ ಇವರಿಗೆಲ್ಲ ಇನಾಮನ್ನಾದರೂ ಹಂಚಬೇಕೆಂದು ಬಿಂದುವು ಯೋಚಿಸಿಯೂ ಇದ್ದನು. ಕಡೆಗೆ ಲೆಖ್ಖವೆಲ್ಲ ಸರಸ್ವತೀ ಪ್ರಸನ್ನವಾಯಿತು. ಬಂದಹಣ ಕಡಿಮೆ ಮತ್ತು ಬರುವ ಹಣ ಬಹಳ-ಗಿರಾಕಿಗಳ ಪೈಕಿ, ತಿಳಿಯದವರಿಗಿಂತ, ತಿಳಿದವರೇ ಬಹಳಜನ ಸರ್ಕಾರಿಯ ಛತ್ರವೂ, ಅರವಟ್ಟಿಗೆಯೂ, ಇದ್ದೇ ಇರುವುವೆಂದು, ಬಂದಿ ದ್ದಾರಾದ್ದರಿಂದ, ಯಾರೂ ಕೈಲಿ ದುಡ್ಡು ತಂದಿರಲಿಲ್ಲ. ಶಂಕರಬಿಂದೂ ಕಂಪನಿಯ ಮೊಕಮ್ಮಿನ ಚೀಲವು ಭರ್ತಿಯಾಗದಿದ್ದರೂ, ತೇಗದ ಪೆಟ್ಟಿ ಗೆಯು ಲೆಕ್ಕದ ಪುಸ್ತಕಗಳಿಂದ ಭರ್ತಿಯಾಯಿತು—"ವಸೂಲಿಗೆ ಒಬ್ಬ ಮುಸಲ್ಮಾನ ಸಾಬಿಯನ್ನು ಗೊತ್ತುಮಾಡಿದರಾಯಿತು. ಬಡಿದು ಬತ್ತ

ತುಂಬಿದಂತೆ, ಬಾಯಿಯನ್ನೆಲ್ಲ ತುಂಬಿ ತರೋಣ!" ಎಂದು ಅನುಭವಸ್ಥನಾದ ಶಂಕರ ಜೋಯಿಸನು ಹೇಳಿ, ಬಿಂದುಮಾಧವನನ್ನು ಸಮಾಧಾನಪಡಿಸಿದನು.

ಶ್ರೀ ಮರುಳುಶಂಕರ ದೇವರಿಗೆ ಕಡೇದಿನ, "ಶಂಕರಬಿಂದೂ ಜಿಹ್ವಾನಂದ ಹೋಟಿಲಿನ" ಸೇವೆಯೂ ನಡೆಯಿತು. ಚಪ್ಪರ ಕಿತ್ತು ಹೊರಟೂ ಆಯಿತು. ಕುಗಾಲಿ ಪಾಳ್ಯವನ್ನು, ದಾಟುವವೇಳೆಗೆ ಅರ್ಧರಾತ್ರಿ. ಗಂಗಡೋಲಿಯು, ಇನ್ನೇನು ಎರಡು ಕಲ್ಲೆಸೆಗೆ ಮತ್ತೊಂದು ಕೊಂಬಿನ ಕೂಗಿನಲ್ಲಿತ್ತು. ಎತ್ತುಗಳಿಗೆ ಮಧ್ಯಾಹ್ನದಿಂದ ಹುಲ್ಲಿಲ್ಲ ನೀರಿಲ್ಲ. ಗಾಡಿ ಹೊಡೆಯುವ ಶಂಭು ಕುಂಭ ಇಬ್ಬರೂ ಮೂಕಿಯಿಂದ ಕೆಳಗೆ ಹಾರಿ ಸೋತ ಎತ್ತುಗಳನ್ನು ಬಿಚ್ಚಿ-ಬಿಟ್ಟರು. ಬಿಂದೂಮಾಧವನು ಪ್ರೀತಿಯ ಗೆಳೆಯನನ್ನು ಕರೆದು-"ಲೆಕ್ಕದ ಪುಸ್ತುಗಳೆಲ್ಲ ಯಾತರಲ್ಲಿವೆ? ಪೆಟ್ಟಿಗೆಯಲ್ಲೇನು? ಈಗ ಅದುಸರಿ! ಆದರೆ ಮತ್ತೊಂದು ವಿಚಾರ, ಎತ್ತುಗಳ ಲೆಕ್ಕಾಚಾರ ಹೇಗೆ. ಅವು ನಡೆಯಲಾರವು. ಅವಕ್ಕೆ ಹುಲ್ಲು ಇಲ್ಲ; ನೀರೂ ಇಲ್ಲ; ಕೈಕಾಲಲ್ಲಿ ತ್ರಾಣವಿಲ್ಲ. ಅದನ್ನೆಲ್ಲ ಎಲ್ಲಿಂದ ತರಿಸೋಣ!"--ಎಂದು ನಿಟ್ಟುಸಿರು ಬಿಟ್ಟನು.

ಕಷ್ಟಕಾಲಕ್ಕೆ ಕೈ ಬಿಡದಲ್ಲವೆ, ಶುಂಠಿಯಬುದ್ಧಿ—"ಏಕಣ್ಣಾ, ಯಾಕೆ, ಇಂಥಾ ಕೆಟ್ಟ ಮೋರೇಮಾಡೀಯೊ? ಎತ್ತುಗಳಿಗೆ ಕುಡಿಯುಕ್ಕೆ ನೀರಾಗಿರೋದು ಏನಾದರೂ ಬೇಕಲ್ಲವೆ? ತಿನ್ನುವುದಕ್ಕೆ ಮೆತ್ತಗಿರೋದು ಏನಾದರೂ ಬೇಕಲ್ಲವೆ?"

—"ಹೌದಯ್ಯಾ, ಅದೆಲ್ಲ ಇರುವುದಾದರೂ ಎಲ್ಲಿ? ಕತ್ತಲೆ ಕರಗಿಸಿದರೇ ಇಲ್ಲಿ ನೀರು! ನಕ್ಷತ್ರಗಳನ್ನು ಬೇಯಿಸಿದರೇ ಮೆತ್ತಗಿರುವುದು ಏನಾದರೂ ಆದೀತು!"

"ಹಾಗಾದರೆ ನೀನೇ ನೋಡುತಾ ಇರು—" ಎಂದು ಶಂಕರ ಶುಂಠಿಯು, ಬಂಡಿಯ ಬುಡಕ್ಕೆ ಕಟ್ಟಿದ್ದ ತಪ್ಪಲೆಗಳನ್ನು ಬಿಚ್ಚಿಗೊಂಡು ಬಂದು ಎತ್ತುಗಳ ಮುಂದಿಟ್ಟು ಗಾಡಿಯ ಹತ್ತಿರ ಬಟ್ಟೆಬರಿ, ಪೆಟ್ಟಿಗೆ ಪೆಠಾರಿಯೆಲ್ಲ ಕಿತ್ತಾಡಿ ಗಾಡಿಯಲ್ಲಿದ್ದ ನಾಲ್ಕಾರು ಗುಂಡಾಲುಗಳನ್ನು ಹೊರಲಾರದೆ ಹೊತ್ತು ತಂದು ಅವುಗಳನ್ನು ಎತ್ತುಗಳ ಮುಂದಿಟ್ಟನು.

ಎತ್ತುಗಳಾದರೂ ಕುಡಿಯಲಾರದಷ್ಟು ಕುಡಿದು, ತಿನ್ನಲಾರದಷ್ಟು ತಿಂದವು. ಶುಂಭಕುಂಭರು ಗಾಡಿಕಟ್ಟಿ ಹೊಡೆದರು. ಇನ್ನೇನು ಶನಿವಾರ ಪೇಟೆ ಬಂತು. ಬೆಳಕು ಹರಿಯುತ್ತ ಬಂತು. ಶಂಕರನು ಬಿಂದುಮಾಧವನನ್ನು ಎಬ್ಬಿಸಿ—"ಈಗೆಲ್ಲಿದ್ದೇವೆ ಹೇಳು!—" ಎಂದು ಕೇಳಿ ಅತ್ತಿತ್ತ ನೋಡಿದನು.

"ಇನ್ನೆಲ್ಲಿ! ನಡು ಕಾಡಿನಲ್ಲಿ! ನೀನು ಕರೆತರುವುದೆಲ್ಲ ಇಂಥಾ ಕಡೆಯೇ, ದಿಕ್ಕು ದೆಶೆ, ನೆಲೆ ನೀರು ಕಾಣದಲ್ಲಿ! ಬೆಳಗಾಯಿತೇನು? ಅದೋ ಅಲ್ಲಿ ದಿಗಂತದ ಬಿಳಿಗೀರು ಕಾಣುತ್ತಾ ಇದೆ. ಆಮರಗಳ ಮೇಲೆ. ಯಾರನ್ನಾದರೂ ಹಳ್ಳಿಗೆ ಕಳಿಸೋಣವೇನು?" ಎಂದ. ಅತ್ತಇತ್ತ ಅಡ್ಡಾಡಿ ನೋಡಿದನು.

ಶಂಕರಶುಂಠಿಯು ಗಟ್ಟಿಯಾಗಿ ನಕ್ಕು—"ಅಲ್ಲ ನೀನೇ ಕುಂಭಕರ್ಣ ಕಾಣೊ! ಈಗ ಶನಿವಾರಪೇಟೆಯ ಬಳಿ ಇದ್ದೇವೆ. ಇಲ್ಲೇತಾನೆ ಎರಡು ಗಾಡಿಗಳನ್ನು ಮಾರಿ, ಪಾಗಡೀಪುರಕ್ಕೆ ಥೈಲಿತಕ್ಕೊಂಡು, ಏನೇನೂ ಅರಿಯದೇ ಇದ್ದೋರಹಾಗೆ ಹೋಗೋದು!"

"ಅಲ್ಲ, ಎತ್ತುಗಳಿಗೆ ಹೊಟ್ಟೆಗಿಲ್ಲದೆ, ಇಲ್ಲಿಯವರಿಗೆ ಹೊಡಕೊಂಡು ಬಂದು ಈಗ ಮಾರುಕ್ಕೋದರೆ ಏನು ಚಂದ!" ಎಂದು ದಿಗ್‌ಭ್ರಾಂತನಾದನು.

"ಅವಕೇನೋ, ಬಡಿದದ್ದೂ ಗೂಡೆ ಗೂಡೆ ಬೋಂಡ ತಿಂದು ತಪ್ಪಲೆ ಗಟ್ಟಲೆ ಖೀರು ಹೊಡೆದಿದಾವೆ!" ಎಂದು ಶಂಕರ ಶುಂಠಿಯು ಸಮಾಧಾನ ಹೇಳಿದನು.

ಶನಿವಾರ ಪೇಟೆಯ ಬಳಿಗೆ ಬಂದರು. ಕಿರುಬೆಳಕು ಹರಿಯಿತು. ಮೂಡಲಗಲ್ಲವು ಕೆಂಪಾಗುವ ಹೊತ್ತಿಗೆ, ನೊಗಗಳನ್ನು ಬಿಚ್ಚಿದರು.

ಶಂಕರಮಾಧವರು ತಿಂಡಿ ತಿಂದು, ತಿರುಗಾಡಿಕೊಂಡು, ಗಿರಾಕಿಗಳನ್ನು ಕರೆದುಕೊಂಡು ಬಂದರು.

ಇತ್ತ ಎತ್ತುಗಳು ನಾಲ್ಕೂ ಮಲಗಿದ್ದವು, ಏಳಲೇ ಇಲ್ಲ. ಅಲ್ಲೇ ಮಲಗಿ, ಕಾಲುಚಾಚಿಕೊಂಡು ಹೊಟ್ಟೆಯುಬ್ಬರಿಸಿಕೊಂಡು, ಕಡೆಯುಸಿರು ಬಿಡುತ್ತಾ, ಆಶ್ರಮ ತೆಗೆದುಕೊಳ್ಳುವುದರಲ್ಲಿದ್ದವು.

........ಸೊಂಕು ಗೆ ಏನೇನೂ ತಿಳಿಯದು. ಯಜಮಾನರೇಕೋ ಮಂಕಾಗಿರುವರೆಂದು ಬಹುವಾಗಿ ಪ್ರಯಾಸಪಟ್ಟು ಉಪಚಾರಮಾಡಿದಳು. ಏನೇನೂ ಉಪಯೋಗವಾಗಲಿಲ್ಲ. ಸ್ನಾನಕ್ಕೆ ಹೋದರೆ ಸುಮ್ಮನೆ ನೀರು ಸುರಿದುಕೊಳ್ಳುತ್ತ ನಿಂತುಬಿಡುವರು, ಸಂಧ್ಯಾವಂದನೆಗೆ ಕುಳಿತರೆ, ಅರ್ಘ್ಯ ವನ್ನೂ ಬಿಡದೆಲೆ ಜಪಕ್ಕೆ ಕುಳಿತುಬಿಡುವರು ; ಏಳರೇ ಏಳರು ! ಯಾಕೆ ? ಏನು ಮಾಡಲೆಂದು ಸೊಂಕುಬಾಯಿಯು ದುಗುಡಗೊಂಡು ನೋಡುವಳು, ನಿಲ್ಲುವಳು, ನಿಂತವಳು ಧೈರ್ಯಮಾಡಿ ಬಳಿಗೆ ಹೋಗುವಳು, ಮತ್ತೀಚೆಗೆ ಬರುವಳು. ಕಡೆಗೊಂದು ದಿನ ಧೈರ್ಯಮಾಡಿ ಟಪಾಲಖಾನೆಯಲ್ಲಿಟ್ಟ ದುಡ್ಡೇನಾದರೂ ಹೋಯಿತ್ತೋ ? ಟಪಾಲಖಾನೆಯಲ್ಲಿ ಕಳವಾಯಿತೆ ? ನಿಮ್ಮ ದುಡ್ಡು ಹೋಯಿತೆ ? ಏನಾಯಿತು ? ಯಾಕೆ ಹೀಗಾದಿರಿ ? ಪರ ಒಕ್ಕಲ ದೇವರಿಗೆ ಹೋಗಬಾರದೆಂದು ನಾನು ಹೇಳಿದರೆ ಕೇಳದೆ ಜಡೇ ಶಂಕರನಿಗೆ ಹೋಗಿದ್ದಿರಿ. ಮರುಳು ಶಂಕರನಿಗೆ ಹೋಗಿದ್ದಿರಿ. ಅಲ್ಲೆಲ್ಲ ಏನಾಯಿತು ಹೇಳಿ—ದಯವಿಟ್ಟು ಹೇಳಿರೆಂದು ಹತ್ತಿರ ಕುಳಿತು ಉತ್ತರೀಯ ಎರಡು ಶೆರಗುಗಳನ್ನೂ ವೈಯ್ಯೆರಡು ಕಡೆಗೂ ಸೆಳೆದುಕೊಂಡು ನಡುವಿನ ಬಳಿ ಬಿಗಿದು ಒಂದೆರಡು ಗಂಟುಹಾಕುತ್ತಾ ಬಿಚ್ಚುತ್ತಾ ಕುಳಿತುಕೊಳ್ಳುವಳು. ಏನೇನು ಮಾಡಿದರೂ ಆಚಾರ್‍ರಿಗೆ ದುಮ್ಮಾನವು ಕಳೆಯದು........

ಫಸಲೆಲ್ಲ ಮನೆಗೆ ಬರುವ ಸಮಯ. ಗದ್ದೆಗಳಲ್ಲಿನ ಪೈರೆಲ್ಲ ಬಂಗಾ ರದ ತೆನೆಗಳ ಭಾರಕ್ಕೆ ಮಲಗಿಹೋಗಿವೆ. ಬಿಂದುಮಾಧವನು ತನ್ನ ಗದ್ದೆಯ ಕೊಯಿಲಿಗೆ ಪ್ರಾರಂಭಿಸಲು, ಗಣಪತಿಯ ಪೂಜೆಮಾಡಿಸಲು ಹೋಗಿದ್ದಾನೆ. ಇತ್ತಲಾಗಿ ಬಿಂದುಮಾಧವನು ನೋಡುತ್ತಿರಲು—ಅಲ್ಲಾರೋ ತಲೆಗೆ ಲಪ್ಪಟ್ಟೆಸುತ್ತಿ—ಒಂದಿಷ್ಟು ಹೊಸತೆನೆಯನ್ನು ಕೈಲಿ ಹಿಡಿದು ಬಲಗೈಲಿನ ಕುಡುಗೋಲನ್ನು ಬೀಸುತ್ತ ಗದ್ದೆಯ ಬದುವಿನ ಮೇಲಿನ ಗಿಡಗಳ ತಲೆಗ ಳನ್ನು ಹಾರಿಸುತ್ತ, ಜಾಗುಹಾಕುತ್ತ ಬರುತ್ತಲಿದ್ದನು. ನಡಿಗೆಯನ್ನು ನೋಡಿಯೇ ತಿಳಿಯಿತು. ಶುಂಠಿ ಜೋಯಿಸ ! ಇವನನ್ನು ತಪ್ಪಿಸಿಕೊಂಡು ಹೋಗಬೇಕು. ಇನ್ನೊಳೆದೆರಡು ಸಾವಿರದ ಕುಯಿಲಿಗೆ ಏನಾದರೂ ಏರ್ಪಾಡು ಮಾಡಿಯಾನೆಂದು ಬಿಂದು ಮಾಧವನು ಗಟ್ಟಿಯಾಗಿ ಮಂತ್ರ ಹೇಳುತ್ತ, ತೆಂಗಿನಕಾಯಿ ಒಡೆದು, ಬಾಳೇಹಣ್ಣಿನ ಮೂತಿಯನ್ನು ಮುರಿದು

ತೆನೆಗಳನ್ನು ಗಣಪತೀ ಮಂಡಲಾಕಾರವಾಗಿಡುತ್ತ ಕುಳಿತನು. ಶಂಕರ ಶುಂಠಿಯು ಹತ್ತಿರಬಂದು—"ಆಹಾ! ಎನುಚಂದ! ಪುರೋಹಿತರು ಬೇಡವೊ? ಸಾವಿರಸಾವಿರ ಬಾಳುವ ಸಾಹುಕಾರರೂ ಕೂಡ ಮುದ್ದೇ ಪೂಜಾರಿಗಳಂತೆ ತಮ್ಮ ಮಂತ್ರ ತಾವೇ ಹೇಳೀನೆಂದು ಕುಳಿತರೇನು ಚಂದವೊ! ಹೂ, ನೀರು ಚುಮುಕಿಸು, ಆಚಮ್ಯ....ಅಪ ಉಪಸ್ಪೃಶ್ಯ, ಸಂಕಲ್ಪ, ಮೂಗು ಹಿಡೀ, ಓಂ ಓಂ, ಶುಭೇ ಶೋಭನೇ" ಎಂದು ದೌಡಾ ದೌಡಿಯಾಗಿ ಹೋಗುವದನ್ನು ಕಂಡು "ಬಾಯಿಮುಚ್ಚು. ಸಾಕು, ನಿನ್ನಿಂದ ಇಷ್ಟೆಲ್ಲ! ಎರಡು ಸಾವಿರದ ನೇವೇದ್ಯಕ್ಕೆ ಇನ್ನೇನು ದೇವರನ್ನು ಪ್ರತಿಷ್ಠೆ ಮಾಡಲಿಕ್ಕೆ ಬಂದೆ" ಎಂದು ಕೂಗಿ ಮೋರೆಯನ್ನು ಕೆಂಪು ಮಾಡಿದನು. ಶಂಕರನು ಅಂಗವಸ್ತ್ರದ ಶೆರಗೊಂದರ ಗಂಟು ಬಿಚ್ಚಿ "ಇಲ್ನೋಡು ಇದೇನು ಬರೀ ಸರಸ್ವತಿ, ಪ್ರಸನ್ನವೋ! ಹದಿನೈದು ದಿನದಿಂದ ಸುತ್ತಿಸುತ್ತಿ ಸುಣ್ಣ ವಾಗೀ ಈ ಇನ್ನೂರರ ಗಂಟನ್ನು ತಂದೆನು. ಆ ಸುತ್ತಲಿನ ಸಿಂಬಿಯು ಕೈಗೇ ಸಿಕ್ಕಲಿಲ್ಲ. ಈ ಹೊತ್ತು ಹೊಸ ಅಕ್ಕಿ ನಮ್ಮನೇಲಿ, ಇಲ್ಲದಿದ್ದರೆ, ಇನ್ನೂ ಇನ್ನೂರು ಮುನ್ನೂರಿಲ್ಲದೆ ಬರುತ್ತಿದ್ದೇನೇ "ರಾಜದ್ವಾರೇ ಸ್ಮಶಾನೇಚ" ಅಂತ ಹೇಳುವರಲ್ಲವೆ. ನಾನು ನಿನ್ನ ಗೆಳೆತನಕ್ಕಾಗಿ ಎಷ್ಟೊಂದು ನೊಂದೆ ಸೋತೆ, ಹಿಡಿ, ನಾನಿನ್ನು ಹೊರಟೆ." ಎಂದು ನೋಟಗಳನ್ನು ಗಣಪತಿ ಮಂಡಲದ ಮೇಲೆಸೆದು, ಎರಡು ಹೆಜ್ಜೆ ಮುಂದಿಟ್ಟು, ಮತ್ತೆ ಹಿಂದಿರುಗಿ ನೋಡಿ ಮತ್ತೆ ಹೊರಟಿರಲು, ಮಾಧವಾಚಾರ್ಯನು ಓಡಿ ಬಂದು— "ಯಾಕಪ್ಪ ಒಂದಿಷ್ಟು ಸಿಟ್ಟಿನ ಕಾವಿಗೇನೇ ಹಾಲು ಉಕ್ಕಿ ಹೋಗೋಣೇ ನಯ್ಯ. ನಿಂತರೆ ಹೇಳೀನು" ಶಂಕರಶುಂಠಿಯು ಹಿಂತಿರುಗದೆಲೆ—"ಇದೋ ಸಾಕು ಟಪಾಲಾಫೀಸಿನವರ ಸಂಗ, ಮಾಧು! ಇಷ್ಟೇನೇ ಸರಿಯೆ"!

ಬಿಂದುಮಾಧವನು ನಕ್ಕು "ರೈಲಿಲಾಖೆಯೋರನ್ನನಂಬಿದ್ದಕ್ಕೆ ಟಪಾ ಲಾಫೀಸಿನೋರಿಗಾಯಿತಲ್ಲ! ನಾವೂ ನೀವೂ ಎಲ್ಲ ಒಂದೆ, ಸುದ್ದೇಮುದ್ದೆ"

ಶಂಕರ "ನಾನೂ ಈ ಹೊತ್ತು ಎದ್ದಾಗಿನಿಂದ ಜಪಾ ಕೂಡ ಮಾಡದೆ ಯೋಚನೆ ಮಾಡಿದ್ದೇನಲ್ಲೋ. ಈ ಪೈರು ನೋಡು, ಈ ಸಾರಿ ಎಷ್ಟೊಂದು ಭತ್ತ, ಸುಮ್ಮನೆ ಮೈಸೂರು ಭತ್ತದ ಯಂತ್ರಕ್ಕೆ! ಭತ್ತವಲ್ಲ, ಹೊಟ್ಟಲ್ಲ ಪಟ್ಟಲ್ಲ, ಸವರನ್ನೇ ಸುರಿದು ಹೋಗುತ್ತೆ.

ನಾನೂ ಅಲ್ಲಿಗೇ ಭತ್ತಕಳಿಸಿ ಅಕ್ಕಿಮಾಡಿಸುತ್ತೇನೆ. ಶಂಕರನು ಹಲ್ಲು ತೆರೆದು ಅಣಕಿಸಿ "ನಾಚಿಕೆಯಿಲ್ಲ! ಯಾಕಪ್ಪ ನನ್ನ ಕೈಲಿ ಆ ಎರಡು ಸಾವಿರದಲ್ಲೊಂದು ಸಾವಿರವನ್ನು ಕೊಡು, ನಾನು ಮನೇ ಕಟ್ಟಿಸಿ ಮಿಶನ್ ತರಿಸಿ, ಮೀಸೆ ಮೇಲೆ ಕೈಹಾಕದಿದ್ದರೆ ಕೇಳು" ಮಾಧವಾಚಾರ್ರು ಸುಮ್ಮನೆ ಮಂಕಾಗಿ ಕುಳಿತುಬಿಟ್ಟರು. ಹಾಗೇನು! ಎಂದು ಹೇಳಿ ನಿಟ್ಟುಸಿರುಬಿಟ್ಟು, ಹತ್ತಿರವಿದ್ದ ಹೊಂಗೆಯ ಮರವನ್ನೊರಗಿ ನಿಂತುಬಿಟ್ಟರು, ಕೂಲಿ ಆಳುಗಳು ಕುಡಗೋಲ ಹಿಡಿದು ಕೊಯ್ಯುತ್ತ ಹೋದರು. ಗಾಳಿಯು ಶಂಕರ ಶುಂಠಿಯ ಸೆರಗನ್ನು ಬಿಂದುಮಾಧವನ ಮೋರೆಗಡ್ಡಲಾಗಿ ಎಸೆಯಿತು.

ಶಂಕರ ಹೇಳಿದ "ನಾನು ನೋಡಿಟ್ಟದ್ದೇನೆ. ಜೋಶೀ-ಫ-ರಾಟನೆ ನಿದ್ದಾನಲ್ಲ ಆ ಕಿರಸ್ತಾನರೋನು ಆತನ ಹತ್ತಿರ ಒಂದು ಮಿಶನ್ನಿದೆ. ಕೇರುಕ್ಕೆ ನಾಲ್ಕು ಹೆಣ್ಣಾಳು, ಇಂಜನ್ನಿಗೆ ಇಬ್ಬರು ಗಂಡಾಳು ಭತ್ತ ಸುರಿಯುಕ್ಕೇ ಒಬ್ಬ ಹುಡುಗ, ಚೀಲ ಹಿಡಿಯುಕ್ಕೆ ಮೂರು ಘಟ್ಟದಾಳು. ಲೆಕ್ಕ ಬರಿಯಕ್ಕೇ ಇನ್ನೇನು ನಾನಾದರೂ ಆಯಿತೆ! ಅಂತು ಸರಿಯಾಗಿ ನೋಡಿಕೊಂಡರೋ, ವೈಸೂರಿಗೆ ಹೋಗೋ ಭತ್ತವೆಲ್ಲ ಇಲ್ಲಿಗೇ ಬರುತ್ತೆ. ಆಗ್ಗಿ ಮುಟ್ಟದ್ದಕ್ಕೆ ಮೂರೂ ಅಂತ ಈ ಸಾರಿ! ಆ ಎರಡುಸಾರಿ ಬಿತ್ತಿದ್ದೆಲ್ಲ ಫಲಕ್ಕೆ ಬರುತ್ತೆ. ಇನ್ನು ಮುಂದೆ ನಿನ್ನೊಂದಿಗೆ ನಾನು ಸೇರೋದೂ ಇಲ್ಲ ನಿನ್ನ ಆ ನಾಲ್ಕು ಸಾವಿರ ಬಂದ ಕೂಡಲೆ ನಾನು ದೇಶಾಂತರವಾದರೂ ಹೋದೇನು. ನಿಮ್ಮಾಕೆಯಿಂದ ನನ್ನಾಕೆಗೆ ಹೇಳಾಣೆಕೆಯಾಗಿವಂತೆ ಕಾಣುತ್ತೆ ನಾನಿನ್ನು ಬದುಕುವಹಾಗಿಲ್ಲ. ಇದೇ ಕಡೇ ಸೂಚನೆ. ನಾನು ಹೊರಟೆ" ಎಂದು ಹೇಳಿ ಶುಂಠಿ ಜೋಯಿಸನು ಎಷ್ಟು ಕರೆದರೂ ನಿಲ್ಲದೇಲೇ ಬೇಗ ಹೋದನು.

ಬಿಂದುಮಾಧವನು ಕುಯಿಲುಪೂಜೆ ಮಾಡಿದಲ್ಲಿ, ಬಂದು ಹುಡುಕಾಡಿದನು. ಇನ್ನೂರು ರೂಪಾಯಿಗಳ ನೋಟು ಇರಲಿಲ್ಲ! ಸಿಗಲಿಲ್ಲ! ಮುಖದ ಮೇಲಿನ ಬೆವರೊರಿಸಿಕೊಳ್ಳುತ್ತ ನಿಂತಿದ್ದ ಒಬ್ಬ ಹೆಣ್ಣಾಳು ಹೇಳಿದಳು "ಆ ದೋಸಿಗರೇ, ನಡೀನಾಗೆ ಶೆಕ್ಕೊಂಡರಲ್ಲ ಒಡ್ಡೇರೆ! " ಕುಡಗೋಲು ಮಸೆಯುತ್ತ ನಿಂತಿದ್ದ ಒಬ್ಬ ಮುದುಕನೂ ಹೇಳಿದನು" ಕೆಳಗೆ ಬಿಸಾಟು ಮತ್ತೆತ್ತಿಗೊಂಡರು ಬುದ್ದಿಯೋರೆ!........

ದೊಡ್ಡ ಕುದುರೆಗೆ ಕಡಲೆ ಹುರುಳಿ, ಜೂಲುನಾಯಿಗೆ ಹಾಲು ಅನ್ನ, ನೀಲಿಗಿರಿಯ ಬೆಕ್ಕಿಗೆ ಕೆನೆಮೊಸರು ತುಪ್ಪ ; ತೊಟ್ಟಿಗೂಳಗಿನ ಹಸುಗೂಸಿಗೆ ಬಿಸಿಹಾಲು ಮತ್ತು ಹೊರಗಿನಾಳುಗಳಿಗೆ ಮುದ್ದೇ ಪಸರು. ಒಳಗಿನೋರಿಗೆಲ್ಲ ತೊಳದಕ್ಕಿ ಅನ್ನ ಇವೆಲ್ಲ ಅಷ್ಟೋಪಚಾರ ಷೋಡಶೋಪಚಾರಮಾಡಿ ಗೃಹ ದೇವತೆ, ಸಹದೇವತೆ ಪರಿವಾರದೇವತೆಗಳನ್ನು ತೃಪ್ತಿಪಡಿಸುತ್ತ ಒಬ್ಬೊಂಟಿ ಗಿತ್ತಿಯಾದ ಸೊಂಕೂಬಾಯಿಯು ವನದೇವತೆಯೇ ಆದಳೆಂದು ಹೇಳು ವವರು ಹೇಳಿಕೊಂಡರು ! ಮಗು ಮಧ್ವರಾಜಿಯು ಹೊಸ್ತಿಲದಾಟಿದ ದಿನದ ಆರತಕ್ಷಿತೆಗೆ ಬಂದ ಹೆಮ್ಮಕ್ಕಳೆಲ್ಲರೂ—“ಸೊಂಕೂಗಿನ್ನೇನವ್ವಾ ಮನೆಯಾ ಯಿತು ಬಾಗಿಲಾಯಿತು, ಕೊಂಕುಳಿಗೆ ಕೂಸಾಯಿತು, ಮೇಲೆ ಮುತ್ತಿ ನಂಥ ಗಂಡಾ, ಬಾಗಿಲಲ್ಲಿ ಮಿಶನ್ನು! ನಮ್ಮನ್ನೇಕವ್ವಾ ಕರೆದಾಳು! ಮರೀ ಬೇಡೌವ್ವಾ ಸೊಂಕೂ” ಎಂದೆಂದು ಹೇಳಿ ನಕ್ಕು ನಲಿದು ಬಾಗಿನಗಳನ್ನು ಶೆರಗದಲ್ಲಿ ಮರೆಮಾಡಿಕೊಂಡು ಹೋದರು.

ಆ ರಾಟನ ಸಾಹೇಬನು ತನ್ನ ಮನೆ ಮಠವನ್ನೆಲ್ಲ ಬಿಂದುಮಾಧವನಿ ಗೊಪ್ಪಿಸಿ ಸಾವಿರರೂಪಾಯಿಗಳ ಥೈಲಿ ತೆಗೆದುಕೊಂಡು ಮತ್ತೆ ಬರುವೆ ನೆಂದು ಹೇಳಿ ಹೊರಟನು. ಅವನ ಮೇಲಿನ ಪ್ರೀತಿಗೆ ಬಿಂದುಮಾಧವನು ತನ್ನ ಹೆಸರಿನೊಂದಿಗೆ ಅವನ ಹೆಸರನ್ನೂ ಸೇರಿಸಿ ಕಂಪನಿಯ ಹೊಸ ಹೆಸ ರನ್ನು ಮಾಡಿದನು. ಅಲ್ಲದೆ ಶೀರ ಹೊಸ ಹೆಸರನ್ನೂ ಮಾಡಬಾರದು! ಗಿರಾಕಿಗಳು ಬಾರದೇ ಹೋದಾರು !

ರಾಟನ್ ಶಂಕರ ರೈಸ್ಮಿಲ್ಸ—ಕಂಪೆನಿಯ ಹೆಸರಿಗೆಷ್ಟೊಂದು ಕಾಗದ ಗಳು! ಒಂದೆರಡು ತಿಂಗಳೊಳಗೇ ಸಾವಿರ ಸಾವಿರ ಖಂಡುಗ ಭತ್ತವು ಬಂದು ಉಗ್ರಾಣದಲ್ಲಿ ಕೂಡಿತು, ಶುಭದಿನದಲ್ಲಿ ಯಂತ್ರ ವ್ರತವನ್ನು ಆಚಾರ್ಯರು ಗ್ರಹಣಮಾಡಿದರು. ಬಿಂಧುಮಾಧವನು ಇಷ್ಟು ಹೊತ್ತಿಗೆ ಬಲು ಹೆಸರು ವಾಸಿಯಾಗಿ ಹೋದನು. ಊರವರೆಲ್ಲರೂ ಸೇರಿ—ಇವನಿಗೊಂದು ಬಿರು ದನ್ನು ಕೊಡಬೇಕೆಂದು ಚಳವಳಿ ಮಾಡಹತ್ತಿದರು. ಮಾಧವನ ಮನೆ ಯವರು ; ಅವರ ನೆಂಟರು ಮತ್ತವರ ಗುರುತು ತಿಳಿದವರು ಮತ್ತೆ ತಂದೆ ತಾಯಿಗಳ ಕಡೆಯವರು ಮೊದಲಾಗಿ ನೂರಾರು ಜನರು ಮಾವೆವರಸೆ ಹುಡುಕಿಕೊಂಡು ಖಂಡುಗಗಟ್ಲೆ ಭತ್ತವನ್ನು ಭಂಡಿಗಳ ಮೇಲೆ ಹೇರಿಕೊಂಡು

ಬಂದು:—ಮನೆಯು ಉಳಿದು, ಮಧ್ವರಾಜಿಯನ್ನು ಷುದ್ದಾಡಿ ಭತ್ತವನ್ನೆಲ್ಲ ಅಕ್ಕಿ ಮಾಡಿಸಿಕೊಂಡು ಹೋಗಹತ್ತಿದರು. ಶಂಕರ ಹೇಳಿದ, ಮೊದಲನೆಯ ವರುಷ, ಹಾಗೇ ಸರಿ. ನಾವು ಬಿಗಿಯಾಗಿರಬಾರದು. ಆ ರಾಟನ್‌ಸಾಬಿಗೆ ಅದಕ್ಕೆ "ಹಾಗಾದುದು, ನೋಡು ಈಗೆಷ್ಟೊಂದು ಜನ ಬಂದು ಮುತ್ತುವರು! ಇರುವ ಸಾಲಿಟ್ಟಂತೆ ಗಾಡಿಗಳು ಬರುತ್ತಲಿವೆ. ಎಲ್ಲೀ ಭತ್ತದ ಗಾಡಿಯನ್ನು ಕೇಳಿದರೂ ರಾಟನ್ ಶಂಕರ ಮಿಲ್ಲಿಗೇನೆ! ಇನ್ನೇನಯ್ಯ ನನ್ನನ್ನಿಷ್ಟು ಬಿಟ್ಟುಬಿಡು" ಎಂದು ಶುಂಠೀ ಜೋಯಿಸನು ಬಿಡಿಸಿಕೊಳ್ಳಲು ಪ್ರಯತ್ನಮಾಡಹತ್ತಿದನು. ಬಿಂದುಮಾಧವನು ಒಪ್ಪಲೊಲ್ಲ. ಒಂದೆರಡು ತಿಂಗಳು ಕಳೆಯಿತು. ಕೂಲಿಯುವರಿಗೂ, ಇಂಜನ್ನ ನಡಿಸುವವನಿಗೂ, ಎಣ್ಣೀ ಖರ್ಚಿಗೂ ಕೂಡ ಬಿಂದುಮಾಧವನು ಟಪಾಲಖಾನೆಯಿಂದ ಹಣತರಿಸಬೇಕಾಗಿ ಬಂದಿತು. ಎಷ್ಟಾದರೂ ಧೈರ್ಯಗೆಡಲಿಲ್ಲ. ಇಷ್ಟಾಗಿ ಬಿಂದುಮಾಧವನಿಗೆ ತಂಟೆ ತಗಾದೆ, ಕೆಲಸದ ಕಿರುಕಳವಿಲ್ಲ. ಒಳಗೆ ಸಂಸಾರವನ್ನೆಲ್ಲ ಸೋಂಕುವು, ಗೃಹದೇವಿಯಾಗಿ ನಡಿಸುತಲಿರುವಳು. ಹರಿಗೋಲು ಅಲ್ಲಾಡಿದ್ದೂ ಕೂಡ ಮಾಧವನಿಗೆ ಕಾಣದ ಹಾಗೆ ಸಂಸಾರದ ನೌಕಾಯಾತ್ರೆ ನಡೆಯುತಲಿದೆ. ಇತ್ತಲಾಗಿ ಹೊರಗಿನ ಕೆಲಸಕ್ಕೆ ಶಂಕರನಿರುವನು. ಗಿರಾಕಿಗಳನ್ನು ಹೊಂದಿಸಿ ಭತ್ತವನ್ನು ತರುವುದು, ಅಕ್ಕಿಯನ್ನೆಲ್ಲ ಸಾಗಿಸುವದು—ಈ ಕಷ್ಟದ ಕೆಲಸವನ್ನೆಲ್ಲ ಶುಂಠೀ ಜೋಯಿಸನೇ ನೋಡುತ್ತಲಿರುವನು. ಇನ್ನೇನು ಇಷ್ಟರ ಮೇಲೆ ಯಂತ್ರದೆಣ್ಣೆ, ಆಳುಗಳ ಸಂಬಳ. ಇವುಗಳಿಗೆ ದುಡ್ಡು ತಾನೆ-ಒಂದೆರಡು ತಿಂಗಳು-ಜನಗಳು ನಂಬಿಕೆ ಬೀಳುವವರೆವಿಗೂ ಟಪಾಲಾಫೀಸಿನಿಂದ ತರಿಸಿದರಾಯಿತು. ಆ ಮೇಲೆ ಹೇಗಿದ್ದರೂ ಒಂದಕ್ಕೆ ನೂರಾಗಿ ಅಲ್ಲಿಗೇಹೋಗಿ ಸೇರಬೇಕಷ್ಟೆ........

ರಾಟನ್‌ಸಾಹೇಬನ ಅಚ್ಚು ಮೆಚ್ಚಿನಾಳು ಒಬ್ಬನಿದ್ದನು ಅವನ ಹೆಸರು ಪಾಯಸ! ಪಾಯಸ ಬಂದು "ಸಾರ್! ಜೋಯಿಸಪ್ಪ ಬಂತು." ಎಂದು ಹೇಳಿ ಕೈತೋರಿಸಿದನು.

ಶಂಕರ ಜೋಯಿಸನು ಕುದುರೆಯನ್ನಿಳಿದು ಬಂದು ಕುರ್ಚಿಯ ಮೇಲೆ ಉಸ್ಸೆಂದು ಕುಳಿತು "ಸಾಕಪ್ಪ! ದಾಸಪ್ಪನ ಸೇರುವೆ!" ಎಂದು ಜೇಬಿ

ನಿಂದೊಂದು ಅಚ್ಚಿನ ಕಾಗದದ ಚೂರನ್ನು ತೆಗೆದುಕೊಟ್ಟನು. ಬಿಂಧುಮಾಧವನು ನೋಡಿ ಯಾವಾಗಿನದು ಇದನ್ನು ಯಾವ ಪತ್ರಿಕೆಯಿಂದ ಕತ್ತರಿಸಿದೆ ಎನಿದು ಹೇಳು. ನಾನಾದರೂ ಹೊರಗೆ ಹೋಗಿ ತಿರುಗಾಡಿ ಬರುತಲಿದ್ದೆ, ಯಾವಾಗಲೂ ನೀನೇ ಹಟಮಾಡಿ ಹೋಗಿ ಇಲ್ಲಿ ಬಂದು ಸಂಕಟಪಡುವೆ ನಿನ್ನಾಯಾಸವನ್ನು ನೋಡಿದರೋ ನನಗೇನೂ ಬೇಡವಾಗುತ್ತೆ" ಎಂದು ಕುರ್ಚಿಯನ್ನು ಹತ್ತಿರಕ್ಕೆಳೆದುಕೊಂಡು ಕುಳಿತನು. ಕಾಲಡಿಯಲ್ಲಿದ್ದ ಮೊಖಮಲ್ಲಿನ ಕಾಲುದಿಂಬು ಉರುಡಿ ಹೋಯಿತ ಮೇಜಿನ ಮೇಲಿನ ಚಿನ್ನದ ಲೇಖನಿ ಉರುಡಿ ಬಿತ್ತು. ಶಂಕರನು ಗೆಜಟ್ಟ ಪತ್ರಿಕೆಯ ಚೂರನ್ನು ತೆಗೆದುಕೊಂಡು ಓದಿದನು "ಇದರಿಂದ ಸಮಸ್ತರಿಗೂ ತಿಳಿಸುವದೇನಂದರೆ ಹೆಗ್ಗಡದೇವನ ಕೋಟೆಯುಬಳಿ ಬಂದಿದ್ದ ಒಂದುಹಿಂಡು ಆನೆಯನ್ನು ಸರಕಾರ ದವರು ಹಿಡಿಸಿ ಪಳಗಿಸುವರು. ಹಿಂಡಿನಲ್ಲಿದ್ದ ಎಂಟಾನೆಗಳ ಪೈಕಿ-ಹಾಲಿ ಉಳಿದಿರುವ ನಾಲ್ಕಾನೆಗಳು ಹರಾಜಿಗೆ ನಿಂತಿವೆ. ಮಾರ್ಚಿ ಇಪ್ಪತ್ತೊಂದನೆಯ ತಾರೀಖು ಸೋಮವಾರದ ದಿನ, ಅಪರಾಹ್ನ ಎರಡುಗಂಟೆಗೆ ಹರಾಜು ಪ್ರಾರಂಭವಾಗುವುದು. ಇಷ್ಟವುಳ್ಳವರು ಫೆಬ್ರುವರೀ ಆಖ್ಯೆರೊಳಗೇ ಐನೂರು ರೂಪಾಯಿ ಫೀಜಿನೊಡನೆ ಅರ್ಜಿಬರಕೊಳ್ಳಬಹುದು........

### ಹರಾಜಿಗೆ ನಿಲ್ಲುವ ಆನೆಗಳ ತಪಶೀಲು ಪಟ್ಟಿ

೧. ಐದಡಿಯ ಸಣ್ಣಾನೆ—ಒಂದುಕಿವಿಯು ಹರಿದುಹೋಗಿದೆ. ಇದರ ಕ್ರಯ ರೂಪಾಯಿ ಎಂಟನೂರು ಮಾತ್ರ.

೨. ಎಂಟಡಿ ಎರಡಂಗುಲದ ಹೆಣ್ಣಾನೆ—ನಾಲ್ಕುತಿಂಗಳ ಮರಿಯ ಜೊತೆಗೆ ಕ್ರಯ. ಸಾವಿರರೂಪಾಯಿ ಮಾತ್ರ.

೩. ಹತ್ತಡಿಯ ಗಂಡಾನೆ—ಒಳ್ಳೇ ಉದ್ದನಾದೊಂದು ದಂತವಿದೆ. ಎಡಗಡೆದಂತ ಮುರಿದಿದೆ. ಕ್ರಯ-ಸಾವಿರದೈನೂರು ಮಾತ್ರ.

೪. ಹತ್ತುವರೆ ಅಡಿಯ ಗಂಡಾನೆ—ಒಂದುಕಾಲು ಕುಂಟು, ಚೆನ್ನಾಗಿ ಪಳಗಿದೆ. ಎರಡು ದಂತಗಳ ಉದ್ದ. (ದವಡೆಯಿಂದ) ಮೂವತ್ತಾರು ಅಂಗುಲಗಳು. ಕ್ರಯ ಸಾವಿರದ ನಾನೂರು ಮಾತ್ರ.

ಇಲ್ಲಿ ಕಾಣಿಸಿರುವ ಕ್ರಯದಪಟ್ಟಿಗೆ ಒಂದೆರಡುನೂರು ಹೆಚ್ಚು ಕಡಿಮೆಯಾದರೂ ಲೆಕ್ಕಿಸದೆ ಸರಕಾರದವರು ಜನಗಳಿಗೆ ಕೊಡಬೇಕೆಂದಿರುವುದ

ರಿಂದ ಪ್ರಜೆಗಳ ಕಡೆಯಿಂದ ಯಾರಾದರೂ ಮುಂದಾಗಿಬಂದು ಬಹು ಉಪ ಯೋಗಕರವಾದ ಈ ಪಳಗಿದಾನೆಗಳನ್ನು ಹರಾಜಿನಲ್ಲಿ ಪಡೆಯುವರೆಂದು ನಂಬಿದ್ದೇವೆ." ಎಂದು ಸುಂತಾಗಿ ಬರೆದಿತ್ತು. ಶಂಠಿಯು ಕಾಗದವನ್ನು ಮಡಿಚಿ ತನ್ನ ರೇಶ್ಮೆಯ ಚೀಲದೊಳಗಿಟ್ಟು "ನೋಡಯ್ಯಾ ಈಗ ಈ ಗಾಡಿ ಗಳನ್ನು ಹುಡುಕುವ ಭಂಡಾಟವನ್ನು ತಪ್ಪಿಸಿದರೆ, ನೀನೇ ಬಿಂದುಮಾಧವ-ನಮ್ಮ ಸಧ್ಯದ ದೇವರು" ಎಂದೆದ್ದು ಬಿಂದುಮಾಧವನ ಭುಜವನ್ನು ತಟ್ಟಿ ದನು. ಇಬ್ಬರೂ ಎದ್ದು ಮನೆಗೆ ಹೋದರು.

ರಾಟನ್ ಸಾಹೇಬನು ರೈಸುಮಿಲ್ಲನ್ನು ದೀಡುಮಾಡಿ ಹಣ ತೆಗೆದು ಕೊಂಡು ಹೋದುದು ಯಾರಿಗೂ ಗೊತ್ತಿರಲಿಲ್ಲ. ಬಿಂದುಮಾಧವನಿಗಂತೂ ತಿಳಿಯದು. ಈದಿನ ಬಂದ ಟಪಾಲಿನಲ್ಲಿ ರಾಟನ್ಕಂಕರ ರೈಸುಮಿಲ್ಲಿನ ಎಜ ಮಾನನಿಗೆ ನೋಟೀಸು ಬಂದಿದೆ.

*   *   *   *

ಸೆಂಕುವು ಅಳುತ್ತಾ ಗಂಡನ ತಲೆಯಕಡೆ ಕುಳಿತಿದ್ದಳು, ಬಿಂಧುಮಾ ಧವನು ತಲೆದಿಂಬನ್ನು ತೆಗೆದೆಸೆದು ತಣ್ಣಗಿದ್ದ ಮಂಚದ ಕಟಕಟೆಯಮೇಲೆ ತಲೆಯನ್ನೊರಗಿಸಿ ಹೆಂಡತಿಯ ಮೊಗವನ್ನು ನೋಡುತಲಿದ್ದನು. ಮಧ್ವ ರಾಜಯು ಚಿನ್ನದ ಬಟ್ಟಲಲ್ಲಿದ್ದ ಹಾಲನ್ನು ಕುಡಿಯದೆ ಸೊಂಕೂಬಾ ಯಿಯ ಜರತಾರಿಯ ಶೆರಗನ್ನು ಹಿಡಿದೆಳೆಯುತಲಿದ್ದನು.

ಮಾರನೆಯ ದಿನ ಫಾರೆಷ್ಟ ರೇಂಜರು ದೌಡಾದೌಡಿ ಕುದುರೆಯ ಮೇಲೆ ಬಂದು ರಾಟನ್ಕಂಕರ ಕುಂಫಿಣಿಯ ಬಳಿ ಕುದುರೆಯನ್ನಿಳಿದು— ಬಿಂದುಮಾಧವನನ್ನು ನೋಡಬೇಕೆಂದರು.

ಹುಡುಗಾಟವೆ, ಆಚಾರ್ರ ಮಗನಾದವನು, ಆನೆ ಕಟ್ಟೋಣವೆಂದ ರೇನು? ಅಂಥ ಅರಮನೆ ಗುರುಮನೆಯವರಿಗೇ ಸಾಧ್ಯವಿಲ್ಲ! ಅಲ್ಲದೆ ಈ ಭತ್ತದ ಯಂತ್ರದ ಮೇಲೆ ಸುಮಾರು ಎಂಟುಸಾವಿರ ರೂಪಾಯಿಗಳ ಸಾಲ ವಿದೆ, ಬಿಂದುಮಾಧವನು ಆ ಕೂಡಲೇ ಸರಕಾರಕ್ಕೆ ಆನೆಯ ಹರಾಜಿಗೆ ತಾನು ನಿಲ್ಲಲು ಇಷ್ಟವಿಲ್ಲವೆಂದು ಬರೆದುಕೊಂಡು ಆ ಊರು ಬಿಟ್ಟು ಹೊರಡ ಬೇಕು! (ಐನೂರು ಹೋದರೂ ಹೋಗಲಿ). ನಾಳೆ ನಾಡಿದ್ದರಲ್ಲೇ

ರಾಟನ ಶಂಕರ ಕಂಪನಿಯು ಹರಾಜಾಗುವದಾಗಿದೆ. ಸಮನ್ಸು ಆಗಲೇ ಹುಟ್ಟಿದೆ.

ಘಾರಿಷ್ಟರೇಂಜರು ಪಾಪ-ಆ ರಾಜಾರಾಗ್ರನ್ನ ಬಲ್ಲವರು........

"ಶಂಕರ! ಸುಮ್ಮನೇ ಆನೆಗೆ ಅರ್ಜಿಹಾಕಿಸಿದ್ದೆಯಲ್ಲ, ಅದಕ್ಕೆ ಸೊಪ್ಪೆಲ್ಲ ಒದಗಿಸುತ್ತಿದ್ದೆ? ಯಂತ್ರದಲ್ಲಿ ಕುಟ್ಟಿದ ಅಕ್ಕಿಯೆಲ್ಲ ಆದರೂ ಸಾಕಾಗುತ್ತಿತ್ತೇನೊ" ಎಂದು ಶಂಕರನ ಸ್ನೇಹಿತ ನಿನ್ನೊಬ್ಬನು ಆತನನ್ನು ನಿಲ್ಲಿಸಿ ಕೇಳಿದನು. ಶಂಕರನಿಗೆ ರೈಲಿಗೆ ಹೋಗುವ ಅವಸರ ರಾಟನ್‌ಸಾಹೇಬನನ್ನು ನೋಡಲು ಹೋಗುತ್ತಲಿದ್ದನು—ಆದರೂ ನಿಂತು ತನ್ನ ಬುದ್ಧಿಚಮತ್ಕಾರವನ್ನು ತೋರಿಸಲು ಹೀಗೆಂದನು! "ಅದೇನು ಮಹಾ ಕೆಲಸ-ರೈಸು ಮಿಲ್ಲಿಟ್ಟವರಿಗೆ ಆನೇ ಸಾಕೋದು ಅಗಾಧವೇನು? ಗುಡ್ಡದಷ್ಟು ಹೊಟ್ಟಿನ ರಾಶಿ ಬಿದ್ದೇ ಬೀಳುತ್ತೆ ನಿತ್ಯ!"—ಎಂದು ಹೇಳುವಷ್ಟರಲ್ಲೇ ಜಟಕಾ ಗಾಡಿಯವನು ಚಾವಟಿಯನ್ನು ಬೀಸಿ ಚಟಾರೆನ್ನಿಸಿದನು.........ಪಾಗಡೀಪುರದಲ್ಲಿ ಬಿಂದುಮಾಧವನು ಇನ್ನೂ ಇನ್ನೂ ಇದ್ದಾನೆ. ಅವನಿಗೆ ವ್ಯಾಪಾರ ಸಾಪಾರದಿಂದ ಸಂಪಾದನೆಯಾಗುತ್ತೆಂಬ ಹುಚ್ಚಿನ್ನೂ ಹೋಗಿಲ್ಲ—ಮಧ್ವರಾಜಿಯ ಹೆಸರಲ್ಲೂ ಸೊಂಕುಬಾಯಿಯ ಹೆಸರಲ್ಲೂ ಇಟ್ಟಿದ್ದ ಐನೂರು ರೂಪಾಯಿಗಳ ಬಂಡವಾಳವನ್ನಿಟ್ಟುಕೊಂಡು ಈಗ ತನಗೆ ಪ್ರಿಯವಾದ ಚೂರ್ಣವನ್ನೂ, ಬೆಂಕಿಪೆಟ್ಟಿಗೆ ಮೊದಲಾದನ್ನೂ ಮಾರುತ್ತ ಮೂರು ಹೊತ್ತೂ ಅಂಗಡಿಯ ಮೇಲೆ ಕುಳಿತಿರುವನು. ಶಂಕರಕುಂಠಿಯೇನಾದನೆಂಬುದೇ ಅವನಿಗಿನ್ನೂ ತಿಳಿಯದು. ತನ್ನ ಹಿಂದಿನ ಸಾಹಸ ಕೃತ್ಯಗಳನ್ನು ನೆನೆನೆನೆಸಿಕೊಂಡು ಆನಂದಪಡುತ್ತ, ಆಶ್ಚರ್ಯಪಡುತ್ತ ಕಾಲಕಳೆಯುತ್ತಲಿರುವನು.

ಪಾಗಡೀಪುರದಲ್ಲಿ ತಟಸ್ಥೇಶ್ವರನ ಏಳುಶಿಖರದ ದೇವಸ್ಥಾನವುಂಟಷ್ಟೇ! ಅದಕ್ಕೆ ದಕ್ಷಿಣಭಾಗದ, ರಥದ ಬೀದಿಯಿದೆಯಲ್ಲ, ಅಲ್ಲೇ ಬಿಂದುಮಾಧವನ ಅಂಗಡಿ ರಥೋತ್ಸವಕಾಲದಲ್ಲಿ ಬಿಂದುಮಾಧವನ ಚೂರ್ಣಕ್ಕೆ ಗಿರಾಕಿಗಳು ಬಲುಜನ........

